## ಸಂವಿಧಾನದ ಮಹತ್ವ:

ಸಂವಿಧಾನವು ದೇಶದ ಮೂಲಭೂತ ಕಾನೂನು ಆಗಿರುವುದರಿಂದ ಅದು ಮಹತ್ವದ್ದಾಗಿದೆ. ಅದಕ್ಕೆ ಎಲ್ಲರೂ ಬದ್ಧರಾಗಿರುತ್ತಾರೆ. ರಾಷ್ಟ್ರಪತಿ, ಪ್ರಧಾನಮಂತ್ರಿ, ಸಂಸತ್ ಸದಸ್ಯರು, ನ್ಯಾಯಾಧೀಶರು, ಅಧಿಕಾರಿ ವರ್ಗ ಹಾಗೂ ದೇಶದ ಎಲ್ಲರೂ ಸಂವಿಧಾನದ ಪಾಲನೆ ಮಾಡಲು ಕಟಿಬದ್ಧರು.

1. ಕಾನೂನಿನ ಎದುರು ಎಲ್ಲರೂ ಸಮಾನರು ಎಂಬ ಸೂತ್ರವನ್ನು ಎತ್ತಿಹಿಡಿದು ಪ್ರಜೆಗಳ ಹಕ್ಕುಗಳನ್ನು ರಕ್ಷಿಸುತ್ತದೆ.
2. ಸರ್ಕಾರ ನಿರ್ವಹಿಸಬೇಕಾದ ಕಾರ್ಯಗಳಿಗೆ ಮಾರ್ಗಸೂಚಿಯಾಗಿ ಕಾರ್ಯನಿರ್ವಹಿಸುತ್ತದೆ
3. ಸರ್ಕಾರದ ಅಂಗಗಳಾದ ಶಾಸಕಾಂಗ, ಕಾರ್ಯಾಂಗ ಹಾಗೂ ನ್ಯಾಯಾಂಗದ ಕಾರ್ಯಗಳನ್ನು ನಿರ್ದೇಶಿಸಿ ಇವುಗಳ ನಡುವೆ ಸಮನ್ವಯ ಸಾಧಿಸಲು ನೆರವಾಗುತ್ತದೆ.
4. ಸಂವಿಧಾನವು ಸರ್ಕಾರ ಮತ್ತು ವ್ಯಕ್ತಿಗಳ ನಡುವೆ ಉತ್ತಮ ಸಂಬಂಧಗಳನ್ನು ಏರ್ಪಡಿಸುತ್ತದೆ.

**ಚಟುವಟಿಕೆ:** ಡಾ. ಬಿ. ಆರ್. ಅಂಬೇಡ್ಕರ್‌ರವರು ಯಾರು? ಅವರನ್ನು ನಾವಿಂದು ಕೃತಜ್ಞತೆಯಿಂದ ಏಕೆ ನೆನೆಯುತ್ತೇವೆ? ಗುಂಪಿನಲ್ಲಿ ಚರ್ಚಿಸಿ.

## ಭಾರತ ಸಂವಿಧಾನದ ರಚನಾ ಸಭೆ

ಭಾರತದ ಸಂವಿಧಾನವನ್ನು 'ಸಂವಿಧಾನ ರಚನಾ ಸಭೆ' ಎಂಬ ವಿಶೇಷ ಸಭೆಯು ಸಿದ್ಧಪಡಿಸಿತು. ಈ ಸಭೆಯ ಸದಸ್ಯರು ಅದರ ಪ್ರಥಮ ಅಧಿವೇಶನದಲ್ಲಿ ಡಾ. ರಾಜೇಂದ್ರಪ್ರಸಾದ್‌ರವರನ್ನು ಅಧ್ಯಕ್ಷರನ್ನಾಗಿ ಆಯ್ಕೆ ಮಾಡಿದರು.

ಸಂವಿಧಾನ ಸಭೆಯಲ್ಲಿ 299 ಮಂದಿ ಸದಸ್ಯರಿದ್ದರು. ಡಿಸೆಂಬರ್ 9, 1946 ರಲ್ಲಿ ಅದರ ಪ್ರಥಮ ಅಧಿವೇಶನ ನಡೆಯಿತು.

## ಕರಡು ಸಮಿತಿ

ಸಂವಿಧಾನ ರಚನಾ ಸಭೆಯು ತನ್ನ ಕಾರ್ಯವನ್ನು ಚುರುಕುಗೊಳಿಸುವ ಉದ್ದೇಶದಿಂದ ಕೆಲವು ಸಮಿತಿಗಳನ್ನು ರಚಿಸಿತು. ಅಲ್ಲದೆ ಸಂವಿಧಾನದ ಕರಡು ಪ್ರತಿಯನ್ನು ಸಿದ್ಧಪಡಿಸಲು 'ಸಂವಿಧಾನ ಕರಡು ಸಮಿತಿ' ಯನ್ನು ನೇಮಿಸಿತು. ಈ ಸಮಿತಿಯ ಅಧ್ಯಕ್ಷರು ಡಾ. ಬಿ. ಆರ್. ಅಂಬೇಡ್ಕರ್.

1. ಸದಸ್ಯರು ಸಂವಿಧಾನದ ಕರಡು ಪ್ರತಿಯನ್ನು ಪರಿಶೀಲಿಸಿ 2473 ತಿದ್ದುಪಡಿಗಳನ್ನು ಸೂಚಿಸಿದ್ದರು. ಕರಡು ಸಂವಿಧಾನ ಮತ್ತು ತಿದ್ದುಪಡಿಗಳನ್ನು ಸಂವಿಧಾನ ರಚನಾ ಸಭೆಯಲ್ಲಿ ವಿವರವಾಗಿ ಚರ್ಚಿಸಲಾಯಿತು. ಹೀಗೆ ಸಂವಿಧಾನಕ್ಕೆ ಅಂತಿಮ ರೂಪ ನೀಡಲು ಸುಮಾರು ಮೂರು ವರ್ಷಗಳು ಬೇಕಾದವು.
2. ಡಾ. ಅಂಬೇಡ್ಕರ್ 15-8-1947 ರಿಂದ 26-1-1950 ರವರೆಗಿನ ಅವಧಿಯಲ್ಲಿ ಕಾನೂನು ಮಂತ್ರಿಗಳಾಗಿದ್ದರು.

ಭಾರತದ ಸಂವಿಧಾನವನ್ನು ಜನವರಿ 26, 1950 ರಂದು ಜಾರಿಗೊಳಿಸಲಾಯಿತು.ಈ ಸಂವಿಧಾನವು ಭಾರತವನ್ನು ಗಣರಾಜ್ಯವೆಂದು ಘೋಷಣೆ ಮಾಡಿತು.ಅದರ ನೆನಪಿಗಾಗಿ ನಾವು ಪ್ರತಿ ವರ್ಷವೂ ಜನವರಿ 26 ರಂದು ಗಣರಾಜ್ಯೋತ್ಸವವನ್ನು ರಾಷ್ಟ್ರೀಯ ಹಬ್ಬವನ್ನಾಗಿ ಆಚರಿಸುತ್ತೇವೆ. ಪ್ರತಿ ವರ್ಷ ನವೆಂಬರ್ 26 ರಂದು ಸಂವಿಧಾನ ದಿನವನ್ನು ಆಚರಿಸಲಾಗುತ್ತದೆ. ಯಾಕೆಂದರೆ ಇದು ಸಂವಿಧಾನಕ್ಕೆ ಅಧಿಕೃತ ಒಪ್ಪಿಗೆ ನೀಡಿದ ದಿನವಾಗಿದೆ.

ಸಂವಿಧಾನದ ನಿರ್ದೇಶನದಂತೆ ಭಾರತದಲ್ಲಿ 1951- 52 ರಲ್ಲಿ ಪ್ರಥಮ ಮಹಾಚುನಾವಣೆಗಳು ನಡೆದವು.' ರಾಜ್ಯಸಭೆ' ಮತ್ತು 'ಲೋಕಸಭೆ' ಎಂಬ ಎರಡು ಸದನಗಳನ್ನೊಳಗೊಂಡ ಮೊದಲ ಚುನಾಯಿತ ಸಂಸತ್ತು (ಪಾರ್ಲಿಮೆಂಟ್) 1952 ರಲ್ಲಿ ಅಸ್ತಿತ್ವಕ್ಕೆ ಬಂದಿತು.

**ನಮ್ಮ ಸಂವಿಧಾನದ ಗಾತ್ರ:** ಭಾರತ ಸಂವಿಧಾನವು 395 ವಿಧಿಗಳನ್ನು ಹಾಗೂ 12 ಪರಿಚ್ಛೇದಗಳನ್ನು ಒಳಗೊಂಡಿದೆ.

## ಪ್ರಸ್ತಾವನೆ

ಸಂವಿಧಾನದ ಆರಂಭದಲ್ಲಿ ಪೀಠಿಕೆಯ ರೂಪದಲ್ಲಿ 'ಪ್ರಸ್ತಾವನೆ' ಎಂಬುದಿದೆ. ಸಂವಿಧಾನದ ಹೃದಯದಂತಿರುವ ಈ ಪ್ರಸ್ತಾವನೆಯು ಜನತೆಯ ಆದರ್ಶಗಳು ಮತ್ತು ಆಕಾಂಕ್ಷೆಗಳನ್ನು ಪ್ರತಿಬಿಂಬಿಸಿದೆ. ನ್ಯಾಯ, ಸ್ವಾತಂತ್ರ್ಯ, ಸಮಾನತೆ, ವ್ಯಕ್ತಿಗೌರವ, ಭ್ರಾತೃತ್ವ ಹಾಗೂ ರಾಷ್ಟ್ರೀಯ ಏಕತೆ ಮುಂತಾದವುಗಳು ಅಂತಹ ತತ್ವಾದರ್ಶಗಳು.

**ಭಾರತದ ಸಂವಿಧಾನದ**



ಭಾರತದ ಸಂವಿಧಾನ

ಪ್ರಸ್ತಾವನೆ

ಭಾರತದ ಜನಗಳಾದ ನಾವು ಭಾರತವನ್ನು ಒಂದು **ಸಾರ್ವಭೌಮ ಸಮಾಜವಾದೀ ಸರ್ವಧರ್ಮಸಮಭಾವದ ಪ್ರಜಾಸತ್ತಾತ್ಮಕ ಗಣರಾಜ್ಯವಾಗಿ** ರಚಿಸಲು ಮತ್ತು ಅದರ ಸಮಸ್ತ ನಾಗರಿಕರಿಗೆ:

ಸಾಮಾಜಿಕ, ಆರ್ಥಿಕ ಮತ್ತು ರಾಜಕೀಯ **ನ್ಯಾಯ;**
ವಿಚಾರ, ಅಭಿವ್ಯಕ್ತಿ, ವಿಶ್ವಾಸ, ಧರ್ಮಶ್ರದ್ಧೆ ಮತ್ತು ಉಪಾಸನಾ **ಸ್ವಾತಂತ್ರ್ಯ;**
ಸ್ಥಾನಮಾನ ಹಾಗೂ ಅವಕಾಶ **ಸಮಾನತೆ**

ದೊರೆಯುವಂತೆ ಮಾಡಲು ಮತ್ತು ವ್ಯಕ್ತಿ ಗೌರವವನ್ನು, ರಾಷ್ಟ್ರದ ಏಕತೆಯನ್ನು ಹಾಗೂ ಅಖಂಡತೆಯನ್ನು ಸುನಿಶ್ಚಿತಗೊಳಿಸಿ ಅವರಲ್ಲಿ ಭ್ರಾತೃಭಾವನೆಯನ್ನು ವೃದ್ಧಿಗೊಳಿಸಲು ಶ್ರದ್ಧಾಪೂರ್ವಕ ಸಂಕಲ್ಪ ಮಾಡಿದವರಾಗಿ;

ನಮ್ಮ ಸಂವಿಧಾನ ಸಭೆಯಲ್ಲಿ 1949ನೆಯ ಇಸವಿ ನವೆಂಬರ್ ತಿಂಗಳ ಇಪ್ಪತ್ತಾರನೆಯ ತಾರೀಖಾದ ಈ ದಿವಸ ಈ ಮೂಲಕ ಈ ಸಂವಿಧಾನವನ್ನು ಅಂಗೀಕರಿಸಿ, ಅಧಿನಿಯಮಿಸಿ ಅರ್ಪಿಸಿಕೊಂಡಿದ್ದೇವೆ.

**ಪ್ರಸ್ತಾವನೆ**

ಭಾರತದ ಜನಗಳಾದ ನಾವು ಭಾರತವನ್ನು ಒಂದು

ಸಾರ್ವಭೌಮ ಸಮಾಜವಾದೀ ಸರ್ವಧಮಸಮಭಾವದ ಪ್ರಜಾಸತ್ತಾತ್ಮಕದ

ಗಣರಾಜ್ಯವಾಗಿ ರಚಿಸಲು ಮತ್ತು ಅದರ ಸಮಸ್ತ ನಾಗರಿಕರಿಗೆ:

ಸಾಮಾಜಿಕ, ಆರ್ಥಿಕ ಮತ್ತು ರಾಜಕೀಯ ನ್ಯಾಯ;

ವಿಚಾರ ಅಭಿವ್ಯಕ್ತಿ, ವಿಶ್ವಾಸ, ಧರ್ಮಶ್ರದ್ಧೆ ಮತ್ತು ಉಪಾಸನಾ ಸ್ವಾತಂತ್ರ್ಯ;

ಸ್ಥಾನಮಾನ ಹಾಗೂ ಅವಕಾಶ ಸಮಾನತೆ

ದೊರೆಯುವಂತೆ ಮಾಡಲು ಮತ್ತು ವ್ಯಕ್ತಿ ಗೌರವವನ್ನು, ರಾಷ್ಟ್ರದ ಏಕತೆಯನ್ನು

ಹಾಗೂ ಅಖಂಡಯನ್ನು ಸುನಿಶ್ಚಿತಗೊಳಿಸಿ ಅವರಲ್ಲಿ ಭ್ರಾತೃತ್ವ ಭಾವನೆಯನ್ನು ವೃದ್ಧಿಗೊಳಿಸಲು ಶ್ರದ್ಧಾಪೂರ್ವಕ ಸಂಕಲ್ಪ ಮಾಡಿದವರಾಗಿ;

ನಮ್ಮ ಸಂವಿಧಾನ ಸಭಎಯಲ್ಲಿ 1949 ನೆಯ ಇಸವಿ ನವೆಂಬರ್ ತಿಂಗಳ

ಇಪ್ಪಾರನೆಯ ತಾರೀಖಾದ ಈ ದಿವಸ ಈ ಮೂಲಕ ಈ ಸಂವಿಧಾನವನ್ನು ಅಂಗೀಕರಿಸಿ, ಅಧಿನಿಯಮಿಸಿ ಅರ್ಪಿಸಿಕೊಂಡಿದ್ದೇವೆ.

## ಸಂವಿಧಾನದ ಮುಖ್ಯ ಲಕ್ಷಣಗಳು

ನಮ್ಮ ಸಂವಿಧಾನಕ್ಕೆ ತನ್ನದೇ ಆದ ಕೆಲವು ಲಕ್ಷಣಗಳಿವೆ.

**ಲಿಖಿತ ಸಂವಿಧಾನ**: ಭಾರತ ಸಂವಿಧಾನವು ಲಿಖಿತ ರೂಪದಲ್ಲಿದೆ. ಇದು ಪ್ರಪಂಚದಲ್ಲಿಯೇ ಅತಿ ವಿಸ್ತಾರವಾದ ಸಂವಿಧಾನವಾಗಿದೆ. ಸರ್ಕಾರದ ಅಂಗಗಳಾದ ಶಾಸಕಾಂಗ, ಕಾರ್ಯಾಂಗ ಮತ್ತು ನ್ಯಾಯಾಂಗ ಇವುಗಳ ರಚನೆ, ಅಧಿಕಾರ ಮತ್ತು ಕಾರ್ಯವ್ಯಾಪ್ತಿಯನ್ನು ಇದರಲ್ಲಿ ಹೇಳಲಾಗಿದೆ. ಕೇಂದ್ರ ಹಾಗೂ ರಾಜ್ಯ ಸರ್ಕಾರಗಳಿಗೆ ಒಂದೇ ಸಂವಿಧಾನ ಇದೆ. ಆದ್ದರಿಂದ ಸಂವಿಧಾನದ ಗಾತ್ರ ವಿಶಾಲವಾಗಿದೆ.

**ಗಣರಾಜ್ಯ:** ಭಾರತವು ಒಂದು ಗಣರಾಜ್ಯವೆಂದು ಸಂವಿಧಾನವು ಸಾರಿದೆ. ಗಣರಾಜ್ಯದಲ್ಲಿ ರಾಜರ ಆಳ್ವಿಕೆಯಿರುವುದಿಲ್ಲ. ಬದಲಾಗಿ ಪ್ರಜೆಗಳಿಂದ ಚುನಾಯಿತರಾದ ಪ್ರತಿನಿಧಿಗಳ ಆಳ್ವಿಕೆಯಿರುತ್ತದೆ. ಇಂಥ ರಾಜಕೀಯ ವ್ಯವಸ್ಥೆಯನ್ನು ಹೊಂದಿರುವ ಭಾರತವು ಒಂದು 'ಪ್ರಜಾಸತ್ತಾತ್ಮಕ ಗಣರಾಜ್ಯ'ವಾಗಿದೆ.





**ಮೂಲಭೂತ ಹಕ್ಕುಗಳು ಮತ್ತು ಕರ್ತವ್ಯಗಳು:** ಸಂವಿಧಾನವು ಪ್ರಸ್ತುತ ಪೌರರಿಗೆ ಆರು ಮೂಲಭೂತ ಹಕ್ಕುಗಳನ್ನು ನೀಡಿದೆ. ಅವುಗಳನ್ನು ಮೊಟಕುಗೊಳಿಸುವ ಯಾವುದೇ ಶಾಸನವನ್ನಾಗಲಿ, ನಿಯಮಗಳನ್ನಾಗಲಿ, ಯಾವುದೇ ರಾಜ್ಯವು ಮಾಡುವಂತಿಲ್ಲ. ಮೂಲಭೂತ ಹಕ್ಕುಗಳು ಉಲ್ಲಂಘನೆಯಾದಾಗ ಅವುಗಳನ್ನು ರಕ್ಷಿಸುವ ಅಧಿಕಾರ ನ್ಯಾಯಾಂಗಕ್ಕಿದೆ. ನಾಗರಿಕರು ಹಕ್ಕುಗಳನ್ನು ತಮಗಿಷ್ಟ ಬಂದಂತೆ ಚಲಾಯಿಸಿ ಸಾಮಾಜಿಕ ಅಶಾಂತಿಗೆ ಕಾರಣವಾಗಬಾರದು ಅಥವಾ ಕಾನೂನು ವ್ಯವಸ್ಥೆಗೆ ಭಂಗವನ್ನುಂಟು ಮಾಡಬಾರದು. ನಾಗರಿಕರು ಮಾಡಬೇಕಾದ ಹನ್ನೊಂದು ಕರ್ತವ್ಯಗಳನ್ನೂ ಸಹ ಸಂವಿಧಾನದಲ್ಲಿ ಅಳವಡಿಸಲಾಗಿದೆ.

**ಜಾತ್ಯಾತೀತ (ಸೆಕ್ಯುಲರಿಸಂ):** ಸಂವಿಧಾನವು 'ಸರ್ವಧರ್ಮಸಮಭಾವ' ತತ್ವವನ್ನು ಎತ್ತಿಹಿಡಿದಿದೆ. ಇದನ್ನು 'ಸರ್ವಧರ್ಮ' 'ಸಮಭಾವ' ಎಂದು ವ್ಯಾಖ್ಯಾನಿಸಲಾಗುತ್ತದೆ. ಸರ್ಕಾರವು ಧರ್ಮದ ಹೆಸರಿನಲ್ಲಿ ಪಕ್ಷಪಾತ ಮಾಡದೆ ಎಲ್ಲ ಮತಧರ್ಮಗಳನ್ನು ಸಮಾನ ದೃಷ್ಟಿಯಿಂದ ನೋಡಿಕೊಳ್ಳಬೇಕೆಂಬುದು ಇದರರ್ಥ. ಸರ್ಕಾರವು ಯಾವುದೇ ಮತಧರ್ಮವನ್ನು ದೇಶದ ಧರ್ಮವೆಂದು ಪರಿಗಣಿಸುವುದಿಲ್ಲ. ಅದು ಪ್ರತಿಯೊಬ್ಬನಿಗೂ ತನ್ನ ಧರ್ಮಾಚರಣೆ ಹಾಗೂ ನಂಬಿಕೆಯ ಸ್ವಾತಂತ್ರ್ಯ ನೀಡಿದೆ. ಧಾರ್ಮಿಕ ಸ್ವಾತಂತ್ರ್ಯವನ್ನು ಸಾಮಾಜಿಕ ಹಿತದೃಷ್ಟಿಯಿಂದ ನಿಯಂತ್ರಿಸುವ ಅಧಿಕಾರ ಸರ್ಕಾರಕ್ಕೆ ಇದೆ.

**ಸ್ವತಂತ್ರ ನ್ಯಾಯಾಂಗ:** ನಮ್ಮ ನ್ಯಾಯಾಂಗವು ಶಾಸಕಾಂಗ ಹಾಗೂ ಕಾರ್ಯಾಂಗದಿಂದ ಸ್ವತಂತ್ರವಾಗಿದ್ದು ಸಾಕಷ್ಟು ಅಧಿಕಾರವನ್ನು ಹೊಂದಿದೆ. ಸರ್ಕಾರವಾಗಲಿ, ಸಂಸತ್ ಆಗಲಿ ನ್ಯಾಯಾಂಗದಲ್ಲಿ ಹಸ್ತಕ್ಷೇಪ ಮಾಡುವಂತಿಲ್ಲ. ಕಾನೂನಿನ ಎದುರು ಎಲ್ಲರೂ ಸಮಾನರು, ನ್ಯಾಯ ಪಡೆಯುವ ಅವಕಾಶ ಎಲ್ಲರಿಗಿದೆ ಎಂಬ ತತ್ವವನ್ನು ನ್ಯಾಯಾಂಗ ಎತ್ತಿ ಹಿಡಿದಿದೆ. ಸರ್ವೋಚ್ಚ ನ್ಯಾಯಾಲಯದ ತೀರ್ಪನ್ನು ಎಲ್ಲರೂ ಪಾಲಿಸಲೇ ಬೇಕು ಮತ್ತು ಅದು ಅಂತಿಮ ನಿರ್ಧಾರ.

**ವಯಸ್ಕ ಮತದಾನ ಪದ್ಧತಿ:** ವಯಸ್ಕ ನಾಗರಿಕರು (18 ವರ್ಷಕ್ಕೆ ಮೇಲ್ಪಟ್ಟವರು) ಮತದಾನ ಮಾಡಿ ಪ್ರತಿನಿಧಿಗಳನ್ನು ಚುನಾಯಿಸುವ ಕ್ರಮವನ್ನು 'ವಯಸ್ಕ ಮತದಾನ ಪದ್ಧತಿ' ಎನ್ನುವರು. ನಾಗರಿಕರೆಲ್ಲರು ಯಾವುದೇ ಭೇದಭಾವವಿಲ್ಲದೆ ಮತ ಚಲಾಯಿಸಬೇಕು. ಆಗ ಉತ್ತಮ ಸರ್ಕಾರ ಸ್ಥಾಪನೆಯಾಗುತ್ತದೆ. ಭಾರತದ ಸಂವಿಧಾನದ ಆಶಯವು ಸುಖೀರಾಜ್ಯವನ್ನು (ವೆಲ್‌ಫೇರ್ ಸ್ಟೇಟ್) ಸ್ಥಾಪಿಸುವುದಾಗಿದೆ.

ಸಾಮಾಜಿಕ ಮತ್ತು ಆರ್ಥಿಕ ಭದ್ರತೆಯನ್ನು ಎಲ್ಲರಿಗೂ ನೀಡುವ ಗುರಿಯನ್ನು ಇಟ್ಟುಕೊಂಡಿರುವ ರಾಜ್ಯವನ್ನು ಸಾಮಾನ್ಯವಾಗಿ ಸುಖೀರಾಜ್ಯ ಎನ್ನುವರು.

**ಚುನಾವಣಾ ಪದ್ಧತಿ:** ಭಾರತವು ಜಗತ್ತಿನ ಅತಿ ದೊಡ್ಡ ಪ್ರಜಾಪ್ರಭುತ್ವ ದೇಶವಾಗಿದೆ. ಕಳೆದ ಆರು ದಶಕಗಳಿಂದ ಚುನಾವಣೆಗಳು ಸಾಮಾನ್ಯವಾಗಿ ಕಾಲಕಾಲಕ್ಕೆ ನಡೆದಿವೆ. ಈ ಅವಧಿಯಲ್ಲಿ ಪ್ರಜಾಪ್ರಭುತ್ವ ಪದ್ಧತಿಯು ದೇಶದಲ್ಲಿ ಸಾಕಷ್ಟು ಆಳವಾಗಿ ಬೇರೂರಿದೆ. ಇದರ

ಕಾರ್ಯಾಚರಣೆಯಲ್ಲಿ ಕೆಲವು ನ್ಯೂನ್ಯತೆಗಳು ಕಂಡುಬಂದರೂ ಈ ಪದ್ಧತಿಯು ತೃಪ್ತಿಕರವಾಗಿದೆ.

**ಹೊಸ ಪದಗಳು**

ಸಂವಿಧಾನ ಕರಡು ಸಮಿತಿ- 'ಸಂವಿಧಾನ ರಚನಾ ಸಭೆ' ಯಲ್ಲಿ ಮಂಡಿಸಲಾದ ಸಂವಿಧಾನದ ಮೂಲ ಕಚ್ಚಾ ಪ್ರತಿಯನ್ನು (ತಿದ್ದಬೇಕಾದ ಪ್ರತಿ) ಸಿದ್ಧಪಡಿಸಿದ ಸಮಿತಿ. ಪ್ರಜಾಸತ್ತೆ ಪ್ರಜೆಗಳ ಆಳ್ವಿಕೆ, ಪ್ರಜಾಪ್ರಭುತ್ವ.

ಗುಂಪುಗಳಲ್ಲಿ ಚರ್ಚಿಸಿ ಉತ್ತರಿಸಿ.

1. ಸಂವಿಧಾನ ಎಂದರೇನು?
2. ಸಂವಿಧಾನ ಸಭೆಯ ಅಧ್ಯಕ್ಷರು ಯಾರಾಗಿದ್ದರು?
3. ಡಾ.ಬಿ.ಆರ್.ಅಂಬೇಡ್ಕರ್ ಸಂವಿಧಾನ ರಚನೆಯಲ್ಲಿ ವಹಿಸಿದ ಪಾತ್ರವೇನು?
4. ಭಾರತವನ್ನು ಯಾವ ದಿನದಂದು ಗಣರಾಜ್ಯವೆಂದು ಘೋಷಣೆ ಮಾಡಲಾಯಿತು?
5. ವಯಸ್ಕ ಮತದಾನ ಪದ್ಧತಿ ಎಂದರೇನು?
6. ಗಣರಾಜ್ಯವೆಂದರೇನು?
7. ಸರ್ವಧರ್ಮಸಮಭಾವ ಎಂದರೇನು?

**ಚರ್ಚಿಸಿ**

ಪ್ರಸ್ತಾವನೆಯಲ್ಲಿ ಉಲ್ಲೇಖಿಸಿದ ತತ್ವಗಳು ಮತ್ತು ಆದರ್ಶಗಳ ಬಗ್ಗೆ ಚರ್ಚಿಸಿ.

**ಚಟುವಟಿಕೆಗಳು**

1. ನಮ್ಮ ಸಂವಿಧಾನವು ನಮಗೆಲ್ಲರಿಗೂ ಹಕ್ಕುಗಳನ್ನು ಮತ್ತು ಕರ್ತವ್ಯಗಳನ್ನು ಕೊಟ್ಟಿದೆ. ಹಕ್ಕುಗಳು ಹಾಗೂ ಕರ್ತವ್ಯಗಳಲ್ಲಿ ನಿಮ್ಮ ದೃಷ್ಟಿಯಲ್ಲಿ ಯಾವುವು ಮುಖ್ಯ? ಗುಂಪುಗಳಲ್ಲಿ ಚರ್ಚಿಸಿ ನಿಮ್ಮ ಅಭಿಪ್ರಾಯಗಳನ್ನು ಬಿಂದುಗಳ ರೂಪದಲ್ಲಿ ಉಲ್ಲೇಖಿಸಿ.

2. ಸಂವಿಧಾನ ಸಭೆಯಲ್ಲಿನ ಸದಸ್ಯರ ಚಿತ್ರಗಳನ್ನು ಸಂಗ್ರಹಿಸಿ.

# ಪಾಠ- 19: ಮೂಲಭೂತ ಹಕ್ಕುಗಳು ಮತ್ತು ಕರ್ತವ್ಯಗಳು

## ಪಾಠದ ಪರಿಚಯ

ನಮ್ಮ ಸಂವಿಧಾನವು ಭಾರತದ ಪೌರರಿಗೆ ನೀಡಿರುವ ಮೂಲಭೂತ ಹಕ್ಕುಗಳು ಮತ್ತು ಕರ್ತವ್ಯಗಳನ್ನು ಈ ಪಾಠದಲ್ಲಿ ಪರಿಚಯಿಸಲಾಗಿದೆ.

## ಸಾಮರ್ಥ್ಯಗಳು

1. ಸ್ವಾಭಾವಿಕ ಹಕ್ಕುಗಳು ಮತ್ತು ಮೂಲಭೂತ ಹಕ್ಕುಗಳಿಗಿರುವ ವ್ಯತ್ಯಾಸ ತಿಳಿಯುವುದು.
2. ಭಾರತದ ಪ್ರಜೆಗೆ ಸಂವಿಧಾನವು ನೀಡಿರುವ ಮೂಲಭೂತ ಹಕ್ಕುಗಳನ್ನು ಅರ್ಥೈಸಿಕೊಳ್ಳುವುದು.
3. ಸಂವಿಧಾನದಲ್ಲಿ ಅಳವಡಿಸಿರುವ ಹನ್ನೊಂದು ಮೂಲಭೂತ ಕರ್ತವ್ಯಗಳನ್ನು ಅರಿತು ತಮ್ಮ ಜೀವನದಲ್ಲಿ ಅವುಗಳನ್ನು ಪಾಲಿಸಲು ಸಮರ್ಥರಾಗುವುದು.
4. ತಮಗಿರುವ ಹಕ್ಕುಗಳನ್ನು ಅನುಭವಿಸಲು ಅಡಚಣೆಯಾದಾಗ ಅವುಗಳನ್ನು ಮರಳಿ ಪಡೆಯುವ ವಿಧಾನಗಳನ್ನು ಕಂಡುಕೊಳ್ಳುವುದು.

'ಹಕ್ಕು' ಎಂದರೆ ನಾಗರಿಕರಿಗೆ ಸಲ್ಲಬೇಕಾದ ಅಧಿಕಾರ. ಅದು ಸ್ವಾಭಾವಿಕ ಹಕ್ಕು ಆಗಿರಬಹುದು. ಉದಾಹರಣೆ; ಬದುಕುವ ಹಕ್ಕು, ಜೀವರಕ್ಷಣೆಯ ಹಕ್ಕು. ಇಲ್ಲವೆ 'ನ್ಯಾಯ ಸಮ್ಮತ ಹಕ್ಕು' ಆಗಿರಬಹುದು. ಉದಾಹರಣೆ; ಸಮಾನತೆಯ ಹಕ್ಕು, ವಿದ್ಯಾಭ್ಯಾಸದ ಹಕ್ಕು.

ವ್ಯಕ್ತಿಯ ವಿಕಾಸಕ್ಕೆ ಮತ್ತು ರಾಷ್ಟ್ರದ ಅಭ್ಯುದಯಕ್ಕೆ ಕೆಲವು ಸ್ವಾತಂತ್ರ್ಯಗಳು ಮತ್ತು ಮೂಲಭೂತ ಹಕ್ಕುಗಳು ಅನಿವಾರ್ಯ. ಆದ್ದರಿಂದಲೇ ಸಂವಿಧಾನವು ಪ್ರಜೆಗಳಿಗೆ ಕೆಲವು ಮೂಲಭೂತ ಹಕ್ಕುಗಳನ್ನು ನೀಡಿದೆ.

## ಮೂಲಭೂತ ಹಕ್ಕುಗಳ ಅರ್ಥ

ವ್ಯಕ್ತಿಯ ವ್ಯಕ್ತಿತ್ವ ವಿಕಾಸಕ್ಕಾಗಿ ಸಂವಿಧಾನ ನೀಡಿರುವ ಅವಕಾಶಗಳನ್ನು ಮೂಲಭೂತ ಹಕ್ಕುಗಳೆಂದು ಕರೆಯಲಾಗುತ್ತದೆ. ಇವು ನಾಗರಿಕರಿಗೆ ನೀಡಿದ ಸಾಂವಿಧಾನಿಕ ಹಕ್ಕುಗಳಾಗಿವೆ. ಮೂಲಭೂತ ಹಕ್ಕುಗಳು ಸಾಮಾಜಿಕ ಜೀವನಕ್ಕೆ ಅತ್ಯಗತ್ಯವಾಗಿದೆ. ಇವುಗಳನ್ನು ಯಾರೂ ಉಲ್ಲಂಘಿಸುವಂತಿಲ್ಲ. ಮೂಲಭೂತ ಹಕ್ಕುಗಳಿಗೆ ನ್ಯಾಯಾಂಗದ ರಕ್ಷಣೆ ಇದೆ.

## ಮೂಲಭೂತ ಹಕ್ಕುಗಳ ವಿಧಗಳು

ಭಾರತ ಸಂವಿಧಾನವು ದೇಶದ ಎಲ್ಲಾ ನಾಗರಿಕರಿಗೆ ಪ್ರಧಾನವಾಗಿ ಆರು ಮೂಲಭೂತ ಹಕ್ಕುಗಳನ್ನು ನೀಡಿದೆ. ಅವುಗಳೆಂದರೆ;

1. ಸಮಾನತೆಯ ಹಕ್ಕು
2. ಸ್ವಾತಂತ್ರ್ಯದ ಹಕ್ಕು
3. ಶೋಷಣೆಯ ವಿರುದ್ಧದ ಹಕ್ಕು
4. ಧಾರ್ಮಿಕ ಸ್ವಾತಂತ್ರ್ಯದ ಹಕ್ಕು
5. ಸಾಂಸ್ಕೃತಿಕ ಮತ್ತು ಶೈಕ್ಷಣಿಕ ಹಕ್ಕು
6. ಸಂವಿಧಾನಬದ್ಧ ಪರಿಹಾರದ ಹಕ್ಕು

### *1. ಸಮಾನತೆಯ ಹಕ್ಕು:*

ಕಾನೂನಿನ ಮುಂದೆ ಎಲ್ಲರೂ ಸಮಾನರು; ಯಾರೇ ಆಗಲಿ ಕಾನೂನಿಗಿಂತ ದೊಡ್ಡವರಲ್ಲ; ಮತ್ತು ಎಲ್ಲರಿಗೂ ಸಮಾನ ರಕ್ಷಣೆ ದೊರಕಬೇಕು ಎಂಬ ಅಂಶಗಳು ಸಮಾನತೆಯ ಹಕ್ಕಿನಲ್ಲಿ ಒಳಗೊಂಡಿವೆ.

ಧರ್ಮ, ಕುಲ, ಜಾತಿ, ಲಿಂಗ, ಜನ್ಮಸ್ಥಳ ಇವುಗಳ ಆಧಾರದ ಮೇಲೆ ರಾಜ್ಯವು ಪಕ್ಷಪಾತ ಮಾಡುವಂತಿಲ್ಲ. ಅಂಗಡಿ, ಹೊಟೇಲು ಮತ್ತು ಮನೋರಂಜನಾ ಸ್ಥಳಗಳ ಪ್ರವೇಶಕ್ಕೆ ಯಾವುದೇ ಪ್ರಜೆಯ ಮೇಲೆ ನಿರ್ಬಂಧ ಹೇರುವಂತಿಲ್ಲ. ಸಾರ್ವಜನಿಕ ಬಾವಿ, ಕೆರೆ, ರಸ್ತೆ ಮತ್ತು ವಿರಾಮ ಸ್ಥಳಗಳನ್ನು ಉಪಯೋಗಿಸಲು ಕೂಡಾ ನಿರ್ಬಂಧವಿರುವುದಿಲ್ಲ. ಸರ್ಕಾರಿ ಸೇವೆಗೆ ಸೇರಲು ಎಲ್ಲಾ ನಾಗರಿಕರಿಗೂ ಸಮಾನ ಅವಕಾಶವಿದೆ. ಸಾರ್ವಜನಿಕ

ಪೂಜಾಸ್ಥಳಗಳಲ್ಲಿ ಆಯಾ ಮತಧರ್ಮದ ವ್ಯಕ್ತಿಯು ಪ್ರವೇಶಿಸಿ ಪ್ರಾರ್ಥನೆ ಮಾಡುವುದನ್ನು ತಡೆಯುವಂತಿಲ್ಲ.



## *2. ಸ್ವಾತಂತ್ರ್ಯದ ಹಕ್ಕು:*

ಸಂವಿಧಾನದಲ್ಲಿ ನೀಡಿರುವ ಸ್ವಾತಂತ್ರ್ಯದ ಹಕ್ಕು ಪ್ರತಿಯೊಬ್ಬರಿಗೂ ಕೆಳಕಂಡ ಸ್ವಾತಂತ್ರ್ಯಗಳನ್ನು ನೀಡುತ್ತದೆ.

1. ವಾಕ್‌ಸ್ವಾತಂತ್ರ್ಯ ಮತ್ತು ಅಭಿಪ್ರಾಯ ವ್ಯಕ್ತಪಡಿಸುವ ಸ್ವಾತಂತ್ರ್ಯ
2. ಶಾಂತಿಯುತವಾಗಿ ಸಭೆ ಸೇರುವ ಸ್ವಾತಂತ್ರ್ಯ
3. ಸಂಘಸಂಸ್ಥೆಗಳನ್ನು ಸ್ಥಾಪಿಸುವ ಸ್ವಾತಂತ್ರ್ಯ
4. ದೇಶದ ಎಲ್ಲೆಡೆ ನಿರ್ಬಂಧವಿಲ್ಲದೆ ಸಂಚರಿಸುವ ಸ್ವಾತಂತ್ರ್ಯ
5. ಭಾರತದ ಯಾವುದೇ ಭಾಗದಲ್ಲಾದರೂ ವಾಸಿಸುವ ಸ್ವಾತಂತ್ರ್ಯ
6. ಯಾವುದೇ ಉದ್ಯೋಗ, ವೃತ್ತಿ, ವ್ಯಾಪಾರ, ವ್ಯವಹಾರ ಮಾಡುವ ಸ್ವಾತಂತ್ರ್ಯ



**ಚಟುವಟಿಕೆ:** ವಾಕ್ ಸ್ವಾತಂತ್ರ್ಯದ ಪ್ರಾಮುಖ್ಯತೆ ಕುರಿತು ಒಂದು ವಿಚಾರಗೋಷ್ಠಿಯನ್ನು ಏರ್ಪಡಿಸಿ ಅಭಿಪ್ರಾಯ ಸಂಗ್ರಹಿಸಿರಿ.

ಸ್ವಾತಂತ್ರ್ಯವು ಮೂಲಭೂತ ಹಕ್ಕಾಗಿದ್ದರೂ ಅದನ್ನು ಮನಸ್ಸಿಗೆ ಬಂದಂತೆ ಚಲಾಯಿಸಲು ಸಾಧ್ಯವಿಲ್ಲ. ಕೆಲವು ಸಂದರ್ಭಗಳಲ್ಲಿ ರಾಜ್ಯವು ವ್ಯಕ್ತಿ ಸ್ವಾತಂತ್ರ್ಯದ ಮೇಲೆ ನಿರ್ಬಂಧಗಳನ್ನು ಹೇರಬಹುದೆಂದು ಸಂವಿಧಾನವೇ ತಿಳಿಸುತ್ತದೆ. ಉದಾ: ವಾಕ್ ಸ್ವಾತಂತ್ರ ಇದೆಯೆಂದು ಬೇರೆಯವರ ಬಗ್ಗೆ ಇಲ್ಲಸಲ್ಲದ ಹಾಗೂ ಎಲ್ಲೆ ಮೀರಿದ ಮಾತುಗಳನ್ನು ಆಡಿ ಮಾನಹಾನಿ ಮಾಡುವಂತಿಲ್ಲ.

### *3. ಶೋಷಣೆಯ ವಿರುದ್ಧದ ಹಕ್ಕು:*

ಬಡವರು, ಮಹಿಳೆಯರು, ಮಕ್ಕಳು ಮತ್ತು ದುರ್ಬಲರನ್ನು ಶೋಷಣೆ ಮಾಡಬಾರದು ಎಂಬುದು ಈ ಹಕ್ಕಿನ ಉದ್ದೇಶ. ಧರ್ಮ, ಜಾತಿ, ವರ್ಗ ಹಾಗೂ ಲಿಂಗದ ಹೆಸರಿನಲ್ಲಿ ನಡೆಯುವ ಶೋಷಣೆಯನ್ನು ನಿಷೇಧಿಸಲು ಕೇಂದ್ರ ಮತ್ತು ರಾಜ್ಯ ಸರ್ಕಾರಗಳು ಅನೇಕ ಕಾಯಿದೆಗಳನ್ನು ಜಾರಿಗೆ ತಂದಿವೆ. ಉದಾಹರಣೆಗೆ; ವರದಕ್ಷಿಣೆ ಪಡೆಯುವುದು ಶಿಕ್ಷಾರ್ಹವಾಗಿದೆ. ಜೀತ ಪದ್ಧತಿಯನ್ನು ನಿಷೇದಿಸಲಾಗಿದೆ. ಗಣಿಗಾರಿಕೆ, ಬೀಡಿ ತಯಾರಿಕೆ, ಪಟಾಕಿ ತಯಾರಿಕೆಗಳಂತಹ ಅಪಾಯಕಾರಿ ಕೆಲಸಗಳಲ್ಲಿ ಮಕ್ಕಳನ್ನು ದುಡಿಸಿಕೊಳ್ಳುವುದನ್ನು ನಿಷೇದಿಸಲಾಗಿದೆ. ಅವರು ಹದಿನಾಲ್ಕು ವರ್ಷ ಪ್ರಾಯದವರೆಗೆ ಕಡ್ಡಾಯವಾಗಿ ಶಿಕ್ಷಣ ಪಡೆಯಬೇಕೆಂಬ ಕಾನೂನಿದೆ.



### *4. ಧಾರ್ಮಿಕ ಸ್ವಾತಂತ್ರ್ಯದ ಹಕ್ಕು:*

ಭಾರತದ ಪ್ರಜೆಗಳು ತಮಗೆ ಸರಿಯೆನಿಸುವ, ಇಷ್ಟವಾಗುವ ಧರ್ಮವನ್ನು ಸ್ವೀಕರಿಸುವ ಹಾಗೂ ಅನುಸರಿಸುವ ಸ್ವಾತಂತ್ರ್ಯವನ್ನು ಹೊಂದಿರುತ್ತಾರೆ. ಸಾರ್ವಜನಿಕ ಶಾಂತಿ, ಶಿಸ್ತು, ಆರೋಗ್ಯ ಮತ್ತು ನೈರ್ಮಲ್ಯಕ್ಕೆ ಧಕ್ಕೆಯಾಗದಂತೆ ಇತರ ನಿಯಮಗಳನ್ನು ಗಮನದಲ್ಲಿಟ್ಟುಕೊಂಡು, ಮತಧರ್ಮವನ್ನು ಆಚರಿಸುವ ಹಕ್ಕು ಎಲ್ಲರಿಗೂ ಇದೆ. ಬಲಾತ್ಕಾರ, ಮೋಸ ಮತ್ತು ಆಮಿಷಗಳ ಮೂಲಕ ಮತಾಂತರ ಮಾಡಬಾರದು ಎಂದು ಸಂವಿಧಾನದಲ್ಲಿ ಹೇಳಲಾಗಿದೆ.

### *5. ಸಾಂಸ್ಕೃತಿಕ ಮತ್ತು ಶೈಕ್ಷಣಿಕ ಹಕ್ಕು:*

ಧಾರ್ಮಿಕ ಮತ್ತು ಭಾಷೆ ಅಲ್ಪಸಂಖ್ಯಾತರ ಹಿತಾಸಕ್ತಿಯನ್ನು ರಕ್ಷಿಸುವುದು ಈ ಮೂಲಭೂತ ಹಕ್ಕಿನ ಉದ್ದೇಶವಾಗಿದೆ. ಯಾವುದೇ ಜನರು ತಮ್ಮ ಭಾಷೆ, ಲಿಪಿ ಅಥವಾ ಸಂಸ್ಕೃತಿಯನ್ನು ರಕ್ಷಿಸುವ ಹಕ್ಕನ್ನು ಪಡೆದಿದ್ದಾರೆ. ಅಲ್ಪಸಂಖ್ಯಾತರಿಗೆ ವಿದ್ಯಾಸಂಸ್ಥೆಗಳನ್ನು ಸ್ಥಾಪಿಸಿ, ಆಡಳಿತವನ್ನು ನಡೆಸುವ ಹಕ್ಕು ಇದೆ. ಆದರೆ ಭಾಷೆ ಮತ್ತು ಧಾರ್ಮಿಕ ಅಲ್ಪಸಂಖ್ಯಾತ ವಿದ್ಯಾಸಂಸ್ಥೆಗಳು ರಾಜ್ಯದ ನಿಯಮಗಳಿಗೆ ಬದ್ಧವಾಗಿರಬೇಕು.



### 6. ಸಂವಿಧಾನಬದ್ಧ ಪರಿಹಾರದ ಹಕ್ಕು:

ಮೂಲಭೂತ ಹಕ್ಕುಗಳು ಉಲ್ಲಂಘನೆಯಾದಾಗ ನಾಗರಿಕನು ನ್ಯಾಯಾಲಯಕ್ಕೆ ದೂರು ಸಲ್ಲಿಸಬಹುದು. ಈ ಹಕ್ಕನ್ನು 'ಸಂವಿಧಾನಬದ್ಧ ಪರಿಹಾರದ ಹಕ್ಕು' ಎನ್ನುವರು. ಇದರ ಮೂಲಕ ಉಳಿದೆಲ್ಲಾ ಮೂಲಭೂತ ಹಕ್ಕುಗಳನ್ನು ಸಂರಕ್ಷಿಸಿಕೊಳ್ಳಬಹುದಾಗಿದೆ.

ಮೂಲಭೂತ ಹಕ್ಕುಗಳೆಂದರೆ: ನೇರವಾಗಿ ಸಂವಿಧಾನದಿಂದ ನಾಗರಿಕರಿಗೆ ಕೊಡಲ್ಪಟ್ಟ ಹಕ್ಕುಗಳು. ಇವುಗಳನ್ನು ಸಂಸತ್ತು, ವಿಧಾನ ಸಭೆ, ಕಾನೂನಿನ ಮೂಲಕವಾಗಿ, ಅಧಿಕಾರಿ ವರ್ಗ, ಪೊಲೀಸರು ಸೇರಿದಂತೆ ಯಾವುದೇ ಸಾರ್ವಜನಿಕ (ಸರ್ಕಾರಿ) ಸಂಸ್ಥೆಗಳು ಮೊಟಕುಗೊಳಿಸುವುದು ಅಥವಾ ಉಲ್ಲಂಘಿಸುವುದು ನಿಷಿದ್ಧ. ಉಲ್ಲಂಘನೆಯಾದಾಗ ಅನ್ಯಾಯಕ್ಕೆ ಒಳಪಟ್ಟ ವ್ಯಕ್ತಿ ನೇರವಾಗಿ ಉಚ್ಚ ನ್ಯಾಯಾಲಯ ಅಥವಾ ಸರ್ವೋಚ್ಚ ನ್ಯಾಯಲಯದ ಮೊರೆ ಹೋಗಿ ಪರಿಹಾರ ದೊರಕಿಸಿಕೊಳ್ಳಬಹುದು. ಮೂಲಭೂತ ಹಕ್ಕುಗಳಿಗೆ ಧಕ್ಕೆಯುಂಟಾದಲ್ಲಿ ಸರ್ವೋಚ್ಚ ನ್ಯಾಯಾಲಯಕ್ಕೆ ಇಲ್ಲವೆ ಉಚ್ಚ ನ್ಯಾಯಾಲಯಕ್ಕೆ 'ರಿಟ್ ಅರ್ಜಿ' ಯನ್ನು ಸಲ್ಲಿಸಬಹುದು.

## ಮೂಲಭೂತ ಕರ್ತವ್ಯಗಳು

ಮೂಲಭೂತ ಹಕ್ಕುಗಳು ಮತ್ತು ಕರ್ತವ್ಯಗಳು ಒಂದೇ ನಾಣ್ಯದ ಎರಡು ಮುಖಗಳಿದ್ದಂತೆ. 'ಕರ್ತವ್ಯ' ಎಂದರೆ ವ್ಯಕ್ತಿಯು ತನ್ನ ದೇಶಕ್ಕಾಗಿ ಮಾಡಬೇಕಾದ ಹೊಣೆ. ಪ್ರಜೆಗಳು ತಮ್ಮ ಮೂಲಭೂತ ಕರ್ತವ್ಯಗಳನ್ನು ಸ್ವಯಂ ಸ್ಫೂರ್ತಿಯಿಂದ ಮಾಡಿದರೆ ದೇಶದ ಅಭ್ಯುದಯ ಸಾಧಿಸುವುದು ಸುಲಭ.

ಸಂವಿಧಾನದಲ್ಲಿ ಹನ್ನೊಂದು ಮೂಲಭೂತ ಕರ್ತವ್ಯಗಳನ್ನು ಸೇರಿಸಲಾಗಿದೆ. ಅವುಗಳು ಹೀಗಿವೆ.

1. ಸಂವಿಧಾನ, ರಾಷ್ಟ್ರಧ್ವಜ ಮತ್ತು ರಾಷ್ಟ್ರಗೀತೆಯನ್ನು ಗೌರವಿಸುವುದು.

2. ಸ್ವಾತಂತ್ರ್ಯ ಚಳವಳಿಯ ಉನ್ನತ ಆದರ್ಶಗಳನ್ನು ಪಾಲಿಸುವುದು.
3. ಭಾರತದ ಏಕತೆಯನ್ನು ರಕ್ಷಿಸುವುದು.
4. ಮಾತೃಭೂಮಿಯನ್ನು ರಕ್ಷಿಸುವುದು.
5. ಭಾರತೀಯರಾದ ನಾವೆಲ್ಲ ಒಂದು ಎಂಬ ಭಾವನೆಯನ್ನು ಬೆಳೆಸುವುದು.
6. ನಮ್ಮ ಶ್ರೀಮಂತ ಸಾಂಸ್ಕೃತಿಕ ಪರಂಪರೆಯನ್ನು ಹಾಗೂ ಐತಿಹಾಸಿಕ ಸ್ಮಾರಕಗಳನ್ನು ರಕ್ಷಿಸುವುದು.
7. ಪ್ರಾಕೃತಿಕ ಪರಿಸರವನ್ನು ಸಂರಕ್ಷಿಸಿ, ಅಭಿವೃದ್ಧಿ ಪಡಿಸುವುದು.
8. ವೈಜ್ಞಾನಿಕ ಮನೋಭಾವ ಮತ್ತು ವೈಚಾರಿಕತೆಯನ್ನು ಬೆಳೆಸುವುದು.
9. ಸಾರ್ವಜನಿಕ ಆಸ್ತಿಯನ್ನು ರಕ್ಷಿಸುವುದು ಹಾಗೂ ಹಿಂಸೆಯನ್ನು ತ್ಯಜಿಸುವುದು
10. ವೈಯಕ್ತಿಕ ಹಾಗೂ ಸಾಮೂಹಿಕ ಚಟುವಟಿಕೆಗಳಲ್ಲಿ ಪ್ರಾವೀಣ್ಯತೆ ಪಡೆದು ದೇಶದ ಪ್ರಗತಿಗೆ ಶ್ರಮಿಸುವುದು
11. ಎಲ್ಲಾ ತಂದೆ ತಾಯಿಯರು ಹಾಗೂ ಪೋಷಕರು 6 ರಿಂದ 14 ವಯಸ್ಸಿನ ಮಕ್ಕಳಿಗೆ ಶಿಕ್ಷಣ ಪಡೆಯುವ ಅವಕಾಶಗಳನ್ನು ಒದಗಿಸುವುದು.





**ಚಟುವಟಿಕೆ:** 'ಪರಿಸರ ಸಂರಕ್ಷಣೆಯಲ್ಲಿ ಇಂದು ವಿದ್ಯಾರ್ಥಿಗಳ ಪಾತ್ರ' ಎಂಬ ವಿಷಯದ ಮೇಲೆ ಒಂದು ಚರ್ಚಾಕೂಟವನ್ನು ಏರ್ಪಡಿಸಿ ಅಭಿಪ್ರಾಯ ಸಂಗ್ರಹಿಸಿ.

ಪ್ರಜೆಯು ತನ್ನ ಮೂಲಭೂತ ಕರ್ತವ್ಯಗಳನ್ನು ನಿರ್ವಹಿಸದಿದ್ದರೆ ಸರ್ಕಾರವು ಅದನ್ನು ನ್ಯಾಯಾಲಯದಲ್ಲಿ ಪ್ರಶ್ನಿಸುವಂತಿಲ್ಲ. ಆದರೂ ದೇಶದ ಎಲ್ಲ ಪ್ರಜೆಗಳು ಸ್ವಯಂಸ್ಫೂರ್ತಿಯಿಂದ ಮೂಲಭೂತ ಕರ್ತವ್ಯಗಳನ್ನು ನಿರ್ವಹಿಸಬೇಕು.

### ಗುಂಪುಗಳಲ್ಲಿ ಚರ್ಚಿಸಿ ಉತ್ತರಿಸಿ.

1. ಮೂಲಭೂತ ಹಕ್ಕುಗಳು ಎಂದರೇನು?
2. ಸಮಾನತೆಯ ಹಕ್ಕು ಎಂದರೇನು?
3. ಸಾಮಾಜಿಕ ಮತ್ತು ಆರ್ಥಿಕ ಶೋಷಣೆ ಹೇಗೆ ನಡೆಯುತ್ತದೆ? ಉದಾಹರಣೆಗಳನ್ನು ಕೊಡಿ
4. ಮೂಲಭೂತ ಕರ್ತವ್ಯಗಳನ್ನು ಸ್ವಯಂ ಸ್ಫೂರ್ತಿಯಿಂದ ನಾವೇಕೆ ಪಾಲಿಸಬೇಕು?
5. ಯಾವುದಾದರೂ ಮೂರು ಮೂಲಭೂತ ಕರ್ತವ್ಯಗಳನ್ನು ತಿಳಿಸಿ.

**ಚರ್ಚಿಸಿ**

1. ಮೂಲಭೂತ ಹಕ್ಕುಗಳ ಮಹತ್ವ.
2. ಶಾಲಾವಠಾರದಲ್ಲಿ ವಿದ್ಯಾರ್ಥಿಗಳು ಮಾಡಬೇಕಾದ ಕರ್ತವ್ಯಗಳು.

**ಚಟುವಟಿಕೆಗಳು**

1. ಮೂಲಭೂತ ಹಕ್ಕುಗಳು ಮತ್ತು ಮೂಲಭೂತ ಕರ್ತವ್ಯಗಳ ಕುರಿತು ವಿದ್ಯಾರ್ಥಿಗಳಿಂದ ಎರಡು ಮೂರು ನಿಮಿಷ ಭಾಷಣ ಮಾಡಿಸುವುದು.
2. ಪ್ರಜೆಗಳು ಮೂಲಭೂತ ಕರ್ತವ್ಯಗಳ ಪಾಲನೆ ಮಾಡದಿರುವ ಪ್ರಸಂಗಗಳನ್ನು ವಿದ್ಯಾರ್ಥಿಗಳಿಂದ ಹೇಳಿಸುವುದು.(ಉದಾ: ಊರಿನ ಸಾರ್ವಜನಿಕ ಕೆರೆಯಲ್ಲಿ ತ್ಯಾಜ್ಯ ವಸ್ತುಗಳನ್ನು ಎಸೆಯುವುದು; ಪ್ರಾಚೀನ ಕೋಟೆಯ ಕಲ್ಲುಗಳನ್ನು ಒಂದೊಂದಾಗಿ ಕದ್ದೊಯ್ಯುವುದು, ಮತದಾನ ಮಾಡದಿರುವುದು).
3. ನಮ್ಮ ಸಂಸ್ಕೃತಿಯಲ್ಲಿ ಹಕ್ಕುಗಳಂತೆಯೇ ಹೆಚ್ಚಿನ ಪ್ರಾಮುಖ್ಯತೆಯನ್ನು ಕರ್ತವ್ಯಗಳಿಗೆ ನೀಡಿದ್ದಾರೆ. ಈ ಬಗ್ಗೆ ಚರ್ಚಿಸುವುದು.

# ಪಾಠ- 20: ರಾಜ್ಯ ನಿರ್ದೇಶಕ ತತ್ವಗಳು

## ಪಾಠದ ಪರಿಚಯ

ನಮ್ಮ ಸಂವಿಧಾನದಲ್ಲಿ ಅಳವಡಿಸಿರುವ ರಾಜ್ಯ ನಿರ್ದೇಶಕ ತತ್ವಗಳು ಪ್ರಸ್ತಾವನೆಯಲ್ಲಿ ವ್ಯಕ್ತವಾಗಿರುವ ಧ್ಯೇಯೋದ್ದೇಶಗಳನ್ನು ಸಾಧಿಸಲು ಇವು ಸಹಾಯವಾಗುತ್ತವೆ ಎಂಬುದನ್ನು ವಿವರಿಸಲಾಗಿದೆ.

## ಸಾಮರ್ಥ್ಯಗಳು

1. ರಾಜ್ಯ ನಿರ್ದೇಶಕ ತತ್ವಗಳ ಅರ್ಥ ಪ್ರಾಮುಖ್ಯತೆಗಳನ್ನು ತಿಳಿಯುವುದು.
2. ರಾಜ್ಯ ನಿರ್ದೇಶಕ ತತ್ವಗಳು ಸುಖೀರಾಜ್ಯ ಸ್ಥಾಪನೆಗೆ ಹೇಗೆ ಪೂರಕವಾಗಿವೆ ಎಂಬುದನ್ನು ಅರ್ಥೈಸಿಕೊಳ್ಳುವುದು.

## ರಾಜ್ಯ ನಿರ್ದೇಶಕ ತತ್ವಗಳ ಅರ್ಥ

ಸುಖೀರಾಜ್ಯ ಸ್ಥಾಪನೆಯ ಗುರಿಯನ್ನು ಸಾಧಿಸುವುದಕ್ಕಾಗಿ ಸಂವಿಧಾನವು ಕೆಲವು ತತ್ವಗಳನ್ನು ಮುಂದಿಟ್ಟು ರಾಜ್ಯಕ್ಕೆ ಮಾರ್ಗದರ್ಶನ ನೀಡಿದೆ. ಇಂತಹ ಮಾರ್ಗದರ್ಶಿ ಸೂತ್ರಗಳನ್ನು ರಾಜ್ಯ ನಿರ್ದೇಶಕ ತತ್ವಗಳು ಎನ್ನುವರು. ಯಾವುದೇ ಸರ್ಕಾರ ಅಧಿಕಾರಕ್ಕೆ ಬಂದರೂ ಇವುಗಳನ್ನು ಗಮನದಲ್ಲಿಟ್ಟುಕೊಂಡು ರಾಜ್ಯಭಾರ ಮಾಡಬೇಕೆಂಬುದು ಇವುಗಳ ಉದ್ದೇಶವಾಗಿದೆ. ಭಾರದ ಸಮಗ್ರ ಅಭಿವೃದ್ಧಿಗೆ ಇವು ದಿಕ್ಸೂಚಿಯಾಗಿವೆ.

## ರಾಜ್ಯ ನಿರ್ದೇಶಕ ತತ್ವಗಳ ಪ್ರಾಮುಖ್ಯತೆ

ರಾಜ್ಯ ನಿರ್ದೇಶಕ ತತ್ವಗಳು ಕೇಂದ್ರ ಹಾಗೂ ರಾಜ್ಯ ಸರ್ಕಾರಗಳಿಗೆ ಸಂವಿಧಾನ ನೀಡುವ ನಿರ್ದೇಶನಗಳಾಗಿವೆ. ಕಾನೂನು ರಚಿಸುವಾಗ, ನೀತಿಗಳನ್ನು ರಚಿಸಿ ಜಾರಿಗೆ ತರುವಾಗ ಈ ತತ್ವಗಳನ್ನು ಅಳವಡಿಸಿಕೊಳ್ಳುವುದು ಅವಶ್ಯಕ. ಸ್ವಾತಂತ್ರ್ಯ, ಸಮಾನತೆ, ಭ್ರಾತೃತ್ವ

ಸಾಧಿಸಲು ಮತ್ತು ಸುಖಿ ರಾಜ್ಯವನ್ನು ಸ್ಥಾಪಿಸಲು ರಾಜ್ಯ ನಿರ್ದೇಶಕ ತತ್ವಗಳು ಮುಖ್ಯವೆನಿಸುತ್ತವೆ.

## ರಾಜ್ಯ ನಿರ್ದೇಶಕ ತತ್ವಗಳ ವಿಧಗಳು

ಭಾರತ ಸಂವಿಧಾನದಲ್ಲಿ ಅಳವಡಿಸಿರುವ ರಾಜ್ಯ ನಿರ್ದೇಶಕ ತತ್ವಗಳು ಕೆಳಕಂಡಂತಿವೆ.

1. **ಸಾಮಾಜಿಕ ನ್ಯಾಯ:** ಪ್ರಜೆಗಳಿಗೆ ಸಾಮಾಜಿಕ, ಆರ್ಥಿಕ ಮತ್ತು ರಾಜಕೀಯ ನ್ಯಾಯ ಒದಗಿಸಿ ಜನಕಲ್ಯಾಣವನ್ನು ಸಾಧಿಸುವುದು.

2. **ದುರ್ಬಲರಿಗೆ ಸಾಮಾಜಿಕ ನ್ಯಾಯ:** ದುರ್ಬಲರಿಗೆ ಜೀವನಾಧಾರ ನೀಡುವುದು; ಆರ್ಥಿಕ ಶೋಷಣೆಯ ನಿವಾರಣೆ ಮತ್ತು ಶೈಕ್ಷಣಿಕ ಸೌಲಭ್ಯಗಳನ್ನು ಒದಗಿಸುವುದು ಅವರಿಗೆ ಕಾನೂನಿನ ಉಚಿತ ನೆರವು ಒದಗಿಸುವುದು.

3. **ಮಹಿಳೆ ಮತ್ತು ಮಕ್ಕಳ ಕಲ್ಯಾಣ:** ಒಂದೇ ರೀತಿಯ ಕೆಲಸಕ್ಕೆ ಪುರುಷರಷ್ಟೇ ಮಹಿಳೆಯರಿಗೂ ಸಮಾನ ವೇತನ; ಮಹಿಳೆಯರಿಗೆ ಹೆರಿಗೆ ಸೌಲಭ್ಯ; ಮಕ್ಕಳ ಶೋಷಣೆಯ ತಡೆ; ಮಕ್ಕಳು ಆರೋಗ್ಯವಂತರಾಗಿ ಬೆಳೆಯಲು ಅವಕಾಶ ಮತ್ತು ಅವರಿಗೆ ಉಚಿತ ಮತ್ತು ಕಡ್ಡಾಯ ಪ್ರಾಥಮಿಕ ಶಿಕ್ಷಣ.





**4. ಕಾರ್ಮಿಕ ಕಲ್ಯಾಣ**: ಕಾರ್ಮಿಕರ ಯೋಗಕ್ಷೇಮ ನೋಡಿಕೊಳ್ಳುವುದು; ದುಡಿಯುವ ಹಕ್ಕು; ದುಡಿಯಲು ಅನುಕೂಲಕರ ವಾತಾವರಣ; ಕಾರ್ಮಿಕರಿಗೆ ಕನಿಷ್ಠ ವೇತನ; ಮತ್ತು ಅವರಿಗೆ ಆಡಳಿತದಲ್ಲಿ ಭಾಗಿಗಳಾಗಲು ಅವಕಾಶ ನೀಡುವುದು.

**5. ಅಸಹಾಯಕರಿಗೆ ನೆರವು:** ವೃದ್ಧ, ರೋಗಿ ಮತ್ತು ನಿರುದ್ಯೋಗಿಗಳು ಬದುಕಲು ಸರ್ಕಾರದಿಂದ

ನೆರವು.

**6. ಸರ್ವರಿಗೂ ಸಮಾನ ಕಾನೂನು:** ಭಾರತದ ಎಲ್ಲ ಪ್ರಜೆಗಳಿಗೂ ಸಮಾನ ನಾಗರಿಕ ಕಾನೂನು ಜಾರಿಮಾಡುವುದು.

**7. ಮದ್ಯಪಾನ ನಿಷೇದ:** ಮದ್ಯಪಾನದಿಂದ ಆರೋಗ್ಯ ಕೆಡುತ್ತದೆ, ಕುಟುಂಬದ ಆರ್ಥಿಕ ಸ್ಥಿತಿ ಹದಗೆಡುತ್ತದೆ ಹಾಗೂ ಮಹಿಳೆಯರ ಶೋಷಣೆ ಹೆಚ್ಚುತ್ತದೆ. ಇದಕ್ಕಾಗಿ ನಮ್ಮ ಸಂವಿಧಾನವು ಮದ್ಯಪಾನ ನಿಷೇದವನ್ನು ಜಾರಿಗೆ ತರುವಂತೆ ರಾಜ್ಯ ಸರ್ಕಾರಗಳಿಗೆ ನಿರ್ದೇಶನ ನೀಡಿದೆ.

**8. ಕೃಷಿ ಮತ್ತು ಪಶು ಸಂಗೋಪನೆಯ ಸಂಘಟನೆ:** "ರಾಜ್ಯವು ಕೃಷಿಯನ್ನು ಮತ್ತು ಪಶು ಸಂಗೋಪನೆಯನ್ನು ಆಧುನಿಕ ಮತ್ತು ವೈಜ್ಞಾನಿಕ ರೀತಿಯಲ್ಲಿ ಸಂಘಟನೆಗೊಳಿಸುವುದಕ್ಕೆ ಪ್ರಯತ್ನಿಸತಕ್ಕುದು ಮತ್ತು ವಿಶೇಷವಾಗಿ ತಳಿಗಳನ್ನು ಸಂರಕ್ಷಿಸಿ ಉತ್ತಮಗೊಳಿಸುವುದಕ್ಕಾಗಿ ಹಸುಗಳ ಮತ್ತು ಕರುಗಳ ಹಾಗೂ ಇತರ ಹಾಲು ಕೊಡುವ ಮತ್ತು ಭಾರ ಎಳೆಯುವ ದನಕರುಗಳ ವಧೆಯನ್ನು ನಿಷೇಧಿಸುವುದಕ್ಕಾಗಿ ಕ್ರಮ ಕೈಗೊಳ್ಳತಕ್ಕುದು" ಎಂದು ಸಂವಿಧಾನದಲ್ಲಿ ನಿರ್ದೇಶಿಸಲಾಗಿದೆ.

**9. ಪರಿಸರ:** ಪರಿಸರ ರಕ್ಷಣೆ ಮತ್ತು ಸುಧಾರಣೆ ಹಾಗೂ ವನ್ಯಜೀವಿಗಳ ರಕ್ಷಣೆ; ಗಣಿಗಾರಿಕೆ, ಕೈಗಾರಿಕೆಗಳಿಂದ ಉಂಟಾಗುವ ಮಾಲಿನ್ಯಗಳಿಂದ ಪರಿಸರವನ್ನು ಸಂರಕ್ಷಿಸುವುದು. ಹಾಗೂ ವನ್ಯಜೀವಿಗಳ ರಕ್ಷಣೆ ಮಾಡುವುದು.





**10. ಐತಿಹಾಸಿಕ ಸ್ಮಾರಕಗಳ ರಕ್ಷಣೆ:** ಐತಿಹಾಸಿಕ ಸ್ಥಳಗಳ ಹಾಗೂ ಸ್ಮಾರಕಗಳ ರಕ್ಷಣೆ ಮಾಡುವುದು ಉದಾಹರಣೆ: ಹಂಪಿ, ಬೇಲೂರು, ಹಳೇಬೀಡು, ಪಟ್ಟದಕಲ್ಲು, ಶ್ರೀರಂಗಪಟ್ಟಣ, ವಿಜಯಪುರ, ಬಾದಾಮಿ ಮುಂತಾದ ಪ್ರೇಕ್ಷಣೀಯ ಸ್ಥಳಗಳನ್ನು ಸಂರಕ್ಷಿಸುವುದು.



**11. ಅಂತಾರಾಷ್ಟ್ರೀಯ ಶಾಂತಿ, ಭದ್ರತೆ**ಗಳನ್ನು ಕಾಪಾಡುವುದರಲ್ಲಿ ದೇಶವು ಸಹ ಭಾಗಿಯಗಿರುವುದು.

ಸಾಮಾಜಿಕ ನ್ಯಾಯ ಎಂದರೇನು? ಜಾತಿ, ಧರ್ಮ, ಲಿಂಗ, ಭಾಷೆ, ವರ್ಣ, ಪ್ರದೇಶ ಮತ್ತು ಅಂತಸ್ತುಗಳ ಭೇದಭಾವ ಇಲ್ಲದೆ ಎಲ್ಲಾ ನಾಗರಿಕರಿಗೆ ರಕ್ಷಣೆ ನೀಡುವುದು ಹಾಗೂ ಎಲ್ಲರನು ಸಮಾನ ದೃಷ್ಟಿಯಿಂದ ನೋಡುವುದೇ ಸಾಮಾಜಿಕ ನ್ಯಾಯ. ಹಿಂದುಳಿದ ವರ್ಗಗಳ ಹಿತಾಸಕ್ತಿ, ಕನಿಷ್ಠ ವೇತನ, ಜೀತಪದ್ಧತಿಯ ನಿರ್ಮೂಲನೆ, ಮಕ್ಕಳ ಶೋಷಣೆಯ

ನಿರ್ಮೂಲನ, ಸ್ತ್ರೀಯರಿಗೆ ಸಮಾನ ಹಕ್ಕು ಹಾಗೂ ಗೌರವ ಮುಂತಾದವುಗಳು ಸಾಮಾಜಿಕ ನ್ಯಾಯಕ್ಕೆ ಒಳಪಟ್ಟಿವೆ.

ಸಂವಿಧಾನವು ಹಲವಾರು ಸಲಹೆ ಮತ್ತು ನಿರ್ದೇಶನಗಳನ್ನು ರಾಜ್ಯಕ್ಕೆ ನೀಡಿದೆ. ಆದರೂ ಅವುಗಳ ಉಲ್ಲಂಘನೆಯಾದರೆ, ನಾಗರಿಕರು ನ್ಯಾಯಾಲಯದಲ್ಲಿ ದೂರು ಸಲ್ಲಿಸುವಂತಿಲ್ಲ. (ಉದಾಹರಣೆ - ಆರು ದಶಕಗಳು ಕಳೆದರೂ ಕೇಂದ್ರ ಸರ್ಕಾರ ಮತ್ತು ಅನೇಕ ರಾಜ್ಯ ಸರ್ಕಾರಗಳು ಮದ್ಯಪಾನ ನಿಷೇದ ಕಾನೂನು ತಂದಿಲ್ಲ. ಈ ನಿಟ್ಟಿನಲ್ಲಿ ನ್ಯಾಯಾಲಯದಲ್ಲಿ ದೂರು ಸಲ್ಲಿಸುವಂತಿಲ್ಲ.)

**ಚಟುವಟಿಕೆ:** ರಾಜ್ಯ ನಿರ್ದೇಶಕ ತತ್ವಗಳು ನಮ್ಮ ರಾಜ್ಯದಲ್ಲಿ ಎಷ್ಟರ ಮಟ್ಟಿಗೆ ಜಾರಿಗೆ ಬಂದಿವೆ? ಇಂದೂ ಬೇರೆ ಬೇರೆ ರೀತಿಯ ಶೋಷಣೆಗಳು ನಡೆಯುತ್ತಲೇ ಇವೆ. ಈ ವಿಚಾರದಲ್ಲಿ ಒಂದು ಚರ್ಚಾಕೂಟವನ್ನು ಏರ್ಪಡಿಸಿ ಅದರಲ್ಲಿ ಮೂಡಿಬಂದ ಅಭಿಪ್ರಾಯಗಳನ್ನು ಸಂಗ್ರಹಿಸಿ ಪಟ್ಟಿ ಮಾಡಿ.

### ಗುಂಪುಗಳಲ್ಲಿ ಚರ್ಚಿಸಿ ಉತ್ತರಿಸಿ.

1. ರಾಜ್ಯ ನಿರ್ದೇಶಕ ತತ್ವಗಳು ಎಂದರೇನು?
2. ಮಹಿಳೆ ಮತ್ತು ಮಕ್ಕಳ ಕಲ್ಯಾಣ ಸ್ಥಾಪಿಸುವುದಕ್ಕಾಗಿ ಸಂವಿಧಾನವು ರಾಜ್ಯಕ್ಕೆ ಯಾವ ನಿರ್ದೇಶನಗಳನ್ನು ನೀಡಿದೆ?
3. ಸರ್ವರಿಗೂ ಸಮಾನ ಕಾನೂನಿನ ಅವಶ್ಯಕತೆಯನ್ನು ತಿಳಿಸಿ?
4. ಮದ್ಯಪಾನ ನಿಷೇದವನ್ನು ಜಾರಿಗೆ ತರಲು ರಾಜ್ಯಕ್ಕೆ ನಿರ್ದೇಶನವನ್ನು ಏಕೆ ನೀಡಲಾಗಿದೆ?

**ಚರ್ಚಿಸಿ**

1. ದುರ್ಬಲರಿಗೆ ಸಾಮಾಜಿಕ ನ್ಯಾಯ.
2. ಮದ್ಯಪಾನ ನಿಷೇದ.
3. ಐತಿಹಾಸಿಕ ಸ್ಮಾರಕಗಳ ರಕ್ಷಣೆ.

4. ಮಕ್ಕಳ ಶಿಕ್ಷಣ ಹಕ್ಕನ್ನು ಇನ್ನಷ್ಟು ಪರಿಣಾಮಕಾರಿಯಾಗಿ ಕಾರ್ಯರೂಪಕ್ಕೆ ತರಲು ಏನು ಮಾಡತಕ್ಕದ್ದು?

**ಚಟುವಟಿಕೆಗಳು**

1. ನಿಮ್ಮ ಸುತ್ತಮುತ್ತಲಿನ ಸಮುದಾಯದಲ್ಲಿ ಕಂಡು ಬರುವ ಸಾಮಾಜಿಕ ಹಾಗೂ ಆರ್ಥಿಕವಾಗಿ ದುರ್ಬಲರಾಗಿದ್ದವರನ್ನು ಗಮನಿಸಿ. ಅವರೇಕೆ ದುರ್ಬಲರಾಗಿದ್ದಾರೆ ಎಂಬದರ ಬಗ್ಗೆ ಸಹಪಾಠಿಗಳೊಡನೆ ಚಿಂತನೆ ನಡೆಸಿ.
2. ಮದ್ಯಪಾನ ಸೇವನೆ ಹಾಗೂ ಮಾದಕ ಪದಾರ್ಥಗಳ ಬಳಕೆಯು ನಮ್ಮ ಯುವ ಜನಾಂಗದ ಮೇಲೆ ಬೀರುತ್ತಿರುವ ದುಷ್ಪರಿಣಾಮಗಳೇನು? ಈ ವಿಚಾರವಾಗಿ ಒಂದು ವಿಚಾರಗೋಷ್ಠಿಯನ್ನು ಏರ್ಪಡಿಸಿ ಅಭಿಪ್ರಾಯ ಸಂಗ್ರಹಿಸಿ.
3. ಮಕ್ಕಳ ಹಕ್ಕು ಮಗುವಿನ ಸರ್ವತೋಮುಖ ಅಭಿವೃದ್ಧಿಗೆ ಅವಶ್ಯಕವಾಗಿದೆ. ಅವುಗಳ ಉಲ್ಲಂಘನೆಯಾದಾಗ ಚೈಲ್ಡ್ ಲೈನ್ 1098 ಎಂಬ ಸಹಾಯವಾಣಿ ಸಂಖ್ಯೆಗೆ ಕರೆಯನ್ನು ಮಾಡಬಹುದೆಂದು ನಿಮಗೆ ತಿಳಿದಿದೆ. ಈ ವಿಚಾರ ಕುರಿತು ಒಂದು ಚರ್ಚಾಗೋಷ್ಠಿ ಏರ್ಪಡಿಸಿ ಅಭಿಪ್ರಾಯ ಸಂಗ್ರಹಿಸಿ.

# ಪಾಠ- 21: ನಮ್ಮ ರಕ್ಷಣಾ ಪಡೆಗಳು

## ಪಾಠದ ಪರಿಚಯ

ಈ ಪಾಠದಲ್ಲಿ ನಮ್ಮ ರಕ್ಷಣಾಪಡೆಗಳ ವಿಭಾಗಗಳು, ಕಾರ್ಯಗಳು, ತರಬೇತಿ ಕೇಂದ್ರಗಳು, ಅತ್ಯಾಧುನಿಕ ಶಸ್ತ್ರಾಸ್ತ್ರಗಳು, ಕೇಂದ್ರ ಕಚೇರಿ ಮುಂತಾದವುಗಳ ಪರಿಚಯವನ್ನು ನೀಡಲಾಗಿದೆ. ಜೊತೆಗೆ ಪೂರಕ ರಕ್ಷಣಾಪಡೆಗಳು, ಸಹಾಯಕ ರಕ್ಷಣಾಪಡೆಗಳು ಮತ್ತು ನಾಗರಿಕ ರಕ್ಷಣಾಪಡೆಗಳ ಬಗೆಗೆ ಈ ಪಾಠದಲ್ಲಿ ನಿರೂಪಣೆಯಿದೆ.

## ಸಾಮರ್ಥ್ಯಗಳು

1. ನಮ್ಮ ರಕ್ಷಣಾಪಡೆಗಳ ಬಗೆಗೆ ತಿಳಿದುಕೊಳ್ಳುವುದು.
2. 2 ಭೂಸೇನೆ, ನೌಕಾದಳ ಮತ್ತು ವಾಯುಪಡೆಗಳ ಬಗೆಗೆ ಅರ್ಥೈಸಿಕೊಳ್ಳುವುದು.
3. ರಕ್ಷಣಾಪಡೆಗಳ ಸಾಮರ್ಥ್ಯಗಳನ್ನು ಅರಿತುಕೊಳ್ಳುವುದು.
4. ಪೂರಕ ರಕ್ಷಣಾಪಡೆಗಳ ಸೇವೆಯನ್ನು ಅರಿತು ಹೆಮ್ಮೆಪಡುವುದು.
5. ಸಹಾಯಕ ಸೇನಾಪಡೆಗಳ ಸ್ವಯಂಸೇವೆಯನ್ನು ಕುರಿತಾಗಿ ಅಭಿಮಾನಪಡುವುದು.

## ರಕ್ಷಣಾಪಡೆಗಳು

ದೇಶವನ್ನು ಪರಕೀಯರ ಆಕ್ರಮಣಗಳಿಂದ ರಕ್ಷಿಸುವುದು ರಾಷ್ಟ್ರದ ಪ್ರಥಮ ಕರ್ತವ್ಯ. ಈ ಕಾರ್ಯವನ್ನು ರಕ್ಷಣಾಪಡೆಗಳಿಗೆ ನೀಡಲಾಗಿದೆ. ಆದುದರಿಂದ ರಕ್ಷಣಾಪಡೆಗಳ ಪಾತ್ರ ಮಹತ್ವದ್ದಾಗಿದೆ. ಭಾರತವು ಶಿಸ್ತು, ಸಾಮರ್ಥ್ಯ ಹೊಂದಿದ ಹಾಗೂ ಪರಾಕ್ರಮಶಾಲಿಯಾದ ರಕ್ಷಣಾಪಡೆಯನ್ನು ಹೊಂದಿರುವುದು ಹೆಮ್ಮೆಯ ವಿಷಯ. ಸ್ವಾತಂತ್ರ್ಯ ಬಂದ ಮೇಲೆ ನಮ್ಮ ದೇಶದ ಸಮಗ್ರತೆಗೆ ಸವಾಲುಗಳು ಎದುರಾದಾಗ ನಾವು ಅವನ್ನು ಸಮರ್ಥವಾಗಿ ಎದುರಿಸಿದ್ದೇವೆ. ಉದಾಹರಣೆಗೆ ಚೀನಾ ಮತ್ತು ಪಾಕಿಸ್ತಾನದ ದಾಳಿಗಳು. ನಮ್ಮ ಸೇನಾಪಡೆಗಳು ತಾಯಿನಾಡಿಗಾಗಿ ಎಲ್ಲಾ ತ್ಯಾಗಕ್ಕೂ ಸಿದ್ಧ ಎಂಬುದನ್ನು ಕಾರ್ಗಿಲ್ ಯುದ್ಧದಲ್ಲಿ ಪ್ರದರ್ಶಿಸಿದ್ದೇವೆ.

1. 1.ಭಾರತವು 15,200 ಕಿ. ಮೀ. ಭೂಗಡಿ ಪ್ರದೇಶವನ್ನು ಮತ್ತು 7516.5 ಕಿ. ಮೀ. ಜಲಗಡಿ ಪ್ರದೇಶವನ್ನು ಹೊಂದಿದೆ.
2. ದೇಶದ ರಕ್ಷಣಾ ವ್ಯವಸ್ಥೆಗೆ ಆಯವ್ಯಯದ ಶೇ. 40 ಕ್ಕಿಂತ ಹೆಚ್ಚಿನ ಹಣಕಾಸನ್ನು ಮೀಸಲು ಇಡಲಾಗುತ್ತದೆ.

*ರಕ್ಷಣಾಪಡೆಗಳ ಜವಾಬ್ದಾರಿಗಳು*

1. ದೇಶದ ಗಡಿಪ್ರದೇಶಗಳ ರಕ್ಷಣೆ.
2. ದೇಶದ ಸಮಗ್ರತೆಯನ್ನು ಕಾಪಾಡುವುದು.
3. ಕಳ್ಳಸಾಗಾಣಿಕೆ ಮತ್ತು ಕಾನೂನುಬಾಹಿರ ಚಟುವಟಿಕೆಗಳನ್ನು ತಡೆಗಟ್ಟುವುದು.

ಭಾರತದ ರಾಷ್ಟ್ರಪತಿಯವರಿಗೆ ನಮ್ಮ ರಕ್ಷಣಾಪಡೆಗಳ ಸರ್ವೋಚ್ಚ ಅಧಿಕಾರ ನೀಡಲಾಗಿದೆ. ರಕ್ಷಣಾ ವ್ಯವಸ್ಥೆಯು ಮೂರು ವಿಭಾಗಗಳನ್ನು ಹೊಂದಿದೆ: ಭೂಸೇನೆ, ನೌಕಾದಳ ಮತ್ತು ವಾಯುಪಡೆ. ರಕ್ಷಣಾಪಡೆಗಳು ಸ್ವಾತಂತ್ರ್ಯೋತ್ಸವ ಮತ್ತು ಗಣರಾಜ್ಯೋತ್ಸವ ಪರೇಡ್‌ನಲ್ಲಿ ಪಾಲ್ಗೊಂಡು ತಮ್ಮ ಸೇನಾಸಾಮರ್ಥ್ಯವನ್ನು ಪ್ರದರ್ಶಿಸುತ್ತವೆ.

ರಕ್ಷಣಾಪಡೆಗಳಲ್ಲಿ ತಮ್ಮ ಸಾಮರ್ಥ್ಯಗಳನ್ನು ಮೆರೆಯಲು ತರಬೇತಿ ಕೇಂದ್ರಗಳಿವೆ. ಅವುಗಳಲ್ಲಿ ಮುಖ್ಯವಾದವುಗಳು: ರಾಷ್ಟ್ರೀಯ ರಕ್ಷಣಾ ಕಾಲೇಜು, ನವದೆಹಲಿ, ರಕ್ಷಣಾ ಸೇವಾ ಸಿಬ್ಬಂದಿ ತರಬೇತಿ ಕೇಂದ್ರ, ಉದಕಮಂಡಲ, ಭಾರತೀಯ ಮಿಲಿಟರಿ ಅಕಾಡೆಮಿ, ಡೆಹರಾಡೂನ್ ಮತ್ತು ರಾಷ್ಟ್ರೀಯ ರಕ್ಷಣಾ ಅಕಾಡೆಮಿ, ಖಡಕ್‌ವಾಸ್ಲಾ, ಪುಣೆ.

## ಭಾರತೀಯ ಭೂಪಡೆ



ಭಾರತದ ಭೂಸೇನೆಯು ವಿಶ್ವದಲ್ಲಿಯೇ ಎರಡನೆಯ ಅತಿದೊಡ್ಡ ಭೂಸೇನಾಪಡೆಯಾಗಿದೆ. ಭೂಸೇನೆಯು ಪದಾತಿದಳ (ಸೈನಿಕ), ಅಶ್ವದಳ, ಪಿರಂಗಿದಳ, ಒಂಟೆದಳ ಮತ್ತು ಯುದ್ಧ ಟ್ಯಾಂಕರ್ ಗಳನ್ನು ಹೊಂದಿದೆ.

ಭೂಸೇನೆಯಲ್ಲಿ ಒಟ್ಟು 11,00,000 ಯೋಧರಿದ್ದಾರೆ. 9,60,000 ದಷ್ಟು ಕಾಯ್ದಿಟ್ಟ ಯೋಧರಿದ್ದಾರೆ.

ಭೂಸೇನೆಯ ಮುಖ್ಯಸ್ಥರನ್ನು ದಂಡನಾಯಕ (ಜನರಲ್) ಎಂದು ಕರೆಯುವರು.ಇವರು ಸೇನೆಯ ನಿಯಂತ್ರಣ, ತರಬೇತಿ, ಕಾರ್ಯಾಚರಣೆ ಮತ್ತು ಆಡಳಿತ ವ್ಯವಸ್ಥೆಯನ್ನು ಹೊಸದಿಲ್ಲಿಯಲ್ಲಿರುವ ಭೂಸೇನೆಯ ಪ್ರಧಾನ ಕಚೇರಿಯಿಂದ ನಿರ್ವಹಿಸುತ್ತಾರೆ.

ದೇಶದ ಗಡಿಗಳ ರಕ್ಷಣೆಯ ಜೊತೆಗೆ ನೈಸರ್ಗಿಕ ವಿಕೋಪಗಳಾದ ಭೂಕಂಪ, ಪ್ರವಾಹ, ಬರಗಾಲ, ಭೂಕುಸಿತ, ಬಿರುಗಾಳಿ ಮುಂತಾದ ಸಂದರ್ಭಗಳಲ್ಲಿ ಮಾನವೀಯ ಕಾರ್ಯಗಳನ್ನು ಭೂಸೇನೆ ನಿರ್ವಹಿಸುತ್ತದೆ. ಭೂಸೇನೆಯು ತಾಂತ್ರಿಕವಾಗಿ ಅತ್ಯಂತ ಮುಂದುವರಿದಿದೆಯಲ್ಲದೆ ಬೇಹುಗಾರಿಕೆ ವ್ಯವಸ್ಥೆಯನ್ನು ಹೊಂದಿದೆ.

## ಭಾರತೀಯ ನೌಕಾದಳ



ಕರಾವಳಿ ತೀರವನ್ನು ಹಾಗೂ ದ್ವೀಪಗಳನ್ನು ರಕ್ಷಿಸಲು ನೌಕಾದಳದ ಅಗತ್ಯವಿದೆ. ಭಾರತದ ನೌಕಾದಳವು ಜಗತ್ತಿನಲ್ಲಿ ಆರನೆಯ ಅತಿ ದೊಡ್ಡ ನೌಕಾದಳವಾಗಿದೆ. ಅದರ ಮುಖ್ಯಸ್ಥರನ್ನು ಆಡ್ಮಿರಲ್ ಎಂದು ಕರೆಯುತ್ತಾರೆ. ನೌಕಾದಳದ ಮುಖ್ಯ ಕಚೇರಿ ಹೊಸದಿಲ್ಲಿಯಲ್ಲಿದೆ.

## ಭಾರತೀಯ ವಾಯುಪಡೆ





ನೌಕಾದಳವು ಆಧುನಿಕ ಮಾದರಿಯ ಕ್ಷಿಪಣಿ ಹಡಗುಗಳು ಮತ್ತು ಜಲಾಂತರ್ಗಾಮಿಗಳನ್ನು ಹೊಂದಿದೆ. ಅವುಗಳಲ್ಲಿ ಐ. ಎನ್. ಎಸ್. ವಿಭೂತಿ ಮತ್ತು ಐ. ಎನ್. ಎಸ್. ಗೋದಾವರಿ, ಪ್ರಮುಖವಾದವುಗಳು. ಅಲ್ಲದೆ ಐ. ಎನ್. ಎಸ್. ವಿರಾಟ್ ಮತ್ತು ಐ. ಎನ್. ಎಸ್. ವಿಕ್ರಮಾದಿತ್ಯದಂತಹ ವಿಮಾನವಾಹಕಗಳನ್ನು ಹೊಂದಿರುವ ನೌಕಾದಳವು ಸುಸಜ್ಜಿತವಾಗಿದೆ. ಕರ್ನಾಟಕದ ಕಾರವಾರದಲ್ಲಿ 'ಸೀಬರ್ಡ್' ನೌಕಾ ನೆಲೆಯನ್ನು ಸ್ಥಾಪಿಸಲಾಗಿದೆ.

ಭಾರತವು ಪ್ರಪಂಚದಲ್ಲಿಯೇ ಐದನೆಯ ಅತಿ ದೊಡ್ಡ ವಾಯುಪಡೆಯನ್ನು ಹೊಂದಿದೆ. ಇದರ ಮುಖ್ಯಸ್ಥರನ್ನು ಏರ್ ಚೀಫ್ ಮಾರ್ಷಲ್ ಎನ್ನುವರು. ಇದರ ಕೇಂದ್ರ ಕಚೇರಿ ಹೊಸದಿಲ್ಲಿಯಲ್ಲಿದೆ. ಆಡಳಿತದ ಅನುಕೂಲಕ್ಕಾಗಿ ವಾಯುಪಡೆಯನ್ನು ಐದು ಕಮಾಂಡಗಳಾಗಿ ವಿಂಗಡಿಸಲಾಗಿದೆ.

ಬೆಂಗಳೂರು, ಹೈದರಾಬಾದ್ ಮತ್ತು ದಿಂಡಿಗಲ್‌ನಲ್ಲಿ (ತಮಿಳುನಾಡು) ವಾಯುಪಡೆಗೆ ತರಬೇತಿ ನೀಡುವ ಪ್ರಮುಖ ಕೇಂದ್ರಗಳಿವೆ. ವಾಯುಪಡೆಯು ತಂತ್ರಜ್ಞಾನದ ಅಳವಡಿಕೆಯಿಂದ ಅನೇಕ ಹೊಸ ಯುದ್ಧ ವಿಮಾನಗಳನ್ನು ಹೊಂದಿ ಶಸ್ತ್ರಸನ್ನದ್ಧವಾಗಿದೆ.

ನಮ್ಮ ವಾಯುಪಡೆಯು ಜಾಗ್ವಾರನಂತಹ ಆಧುನಿಕ ಯುದ್ಧ ವಿಮಾನಗಳನ್ನು ಹೊಂದಿದೆ. ಅದು ಒಟ್ಟು 1,00,000 ರಷ್ಟು ಯೋಧರು ಮತ್ತು 1330 ರಷ್ಟು ಯುದ್ಧ ವಿಮಾನಗಳನ್ನು ಹೊಂದಿದೆ. ವಾಯುಪಡೆಯು ಬಲಾಢ್ಯವಾಗಿರುವುದು ನಮ್ಮೆಲ್ಲರಿಗೆ ಹೆಮ್ಮೆಯ ಸಂಗತಿಯಾಗಿದೆ.

## ಪೂರಕ ರಕ್ಷಣಾಪಡೆಗಳು

ರಕ್ಷಣಾಪಡೆಗಳಲ್ಲದೆ ಅವುಗಳಿಗೆ ವಿಷಮ ಸಂದರ್ಭಗಳಲ್ಲಿ ನೆರವಾಗಲು ಪೂರಕ ರಕ್ಷಣಾ ಪಡೆಗಳು ಕಾರ್ಯನಿರ್ವಹಿಸುತ್ತಿವೆ.

### *ಗಡಿಭದ್ರತಾ ದಳ(Border Security Force):*

ಭಾರತದ ಗಡಿಪ್ರದೇಶಗಳನ್ನು ರಕ್ಷಿಸುವುದು ಗಡಿಭದ್ರತಾ ದಳದ ಪ್ರಮುಖ ಕಾರ್ಯವಾಗಿದೆ. ಕಾರ್ಗಿಲ್ ಯುದ್ಧದಲ್ಲಿ ಗಡಿಭದ್ರತಾ ದಳವು ಪರ್ವತದ ಎತ್ತರದವರೆಗೆ ಹೋಗಿ ಸೇನೆಯ ಜೊತೆಗೂಡಿ ಹೋರಾಟ ಮಾಡಿತು. ಸಾಯುವವರೆಗೆ ಕರ್ತವ್ಯ (Duty UntilDeath) ಎಂಬುದು ಇದರ ಧ್ಯೇಯ ವಾಕ್ಯವಾಗಿದೆ.



**ಗಡಿರಸ್ತೆಗಳ ಸಂಘಟನೆ (Border Roads Organisation):**

ಗಡಿರಸ್ತೆಗಳ ಸಂಘಟನೆಯು ಮುಚ್ಚಿರುವ ರಸ್ತೆಗಳನ್ನು ತೆರವು ಮಾಡಿ ಸೈನಿಕ ಕಾರ್ಯಾಚರಣೆಗಳಿಗೆ ತಕ್ಷಣದ ಸಹಾಯವನ್ನು ಮಾಡುತ್ತದೆ. ರಸ್ತೆ ನಿರ್ಮಾಣ, ಸೇತುವೆ ನಿರ್ಮಾಣ ಮತ್ತು ಒಳಚರಂಡಿ ನಿರ್ಮಾಣದಂತಹ ಕಾರ್ಯಗಳನ್ನು ಈ ಸಂಘಟನೆ ಮಾಡುತ್ತದೆ.

### *ಕರಾವಳಿ ಪಹರೆಯುವರು (Coast Guards):*

ಇದೊಂದು ಅರೆಮಿಲಿಟರಿ ಪಡೆಯಾಗಿದೆ. ಇದರ ಪ್ರಧಾನ ಕಚೇರಿ ಹೊಸದಿಲ್ಲಿಯಲ್ಲಿದೆ. ಕರಾವಳಿ ತೀರವನ್ನು ರಕ್ಷಿಸುವುದು ಇದರ ಜವಾಬ್ದಾರಿಯಾಗಿದೆ.ಬಿರುಗಾಳಿ, ಚಂಡಮಾರುತ, ಸುನಾಮಿಯಂತಹ ಪ್ರಕೃತಿ ವಿಕೋಪ ಸಂದರ್ಭಗಳಲ್ಲಿ ರಕ್ಷಣಾ ಕಾರ್ಯವನ್ನು ಕೈಗೊಳ್ಳುತ್ತದೆ. ಅಕ್ರಮ ಒಳನುಸುಳುವಿಕೆ, ಕಳ್ಳಸಾಗಣೆ ಮುಂತಾದವುಗಳನ್ನು ತಡೆಗಟ್ಟುವುದು ಇದರ ಪ್ರಮುಖ ಕಾರ್ಯವಾಗಿದೆ.



ಕರಾವಳಿ ಪಹರೆಯು 84 ಅತ್ಯಾಧುನಿಕ ಹಡಗುಗಳು ಮತ್ತು 45 ವಿಮಾನ ಹಾಗೂ ಹೆಲಿಕಾಪ್ಟರ್ ಗಳನ್ನು ಹೊಂದಿದೆ. 5440 ಯೋಧರು ಕರಾವಳಿ ಪಹರೆಯಲ್ಲಿದ್ದಾರೆ.

**ಕೇಂದ್ರ ಕೈಗಾರಿಕಾ ಭದ್ರತಾಪಡೆ**:

ಇದು ವಿಶ್ವದ ಅತಿದೊಡ್ಡ ಕೈಗಾರಿಕಾ ಭದ್ರತಾಪಡೆ. 1,28,000 ಯೋಧರು ಇದರಲ್ಲಿದ್ದಾರೆ. ಇದು ದೇಶದಲ್ಲಿರುವ ಸುಮಾರು 300 ಕ್ಕೂ ಹೆಚ್ಚು ಸರಕಾರಿ, ಖಾಸಗಿ ಕೈಗಾರಿಕಾ ಘಟಕಗಳು ಮತ್ತು ಪ್ರಯೋಗಾಲಯಗಳಿಗೆ ಭದ್ರತೆಯನ್ನು ಒದಗಿಸುತ್ತದೆ. ಇದಲ್ಲದೆ ವಿಮಾನ ನಿಲ್ದಾಣ, ಬಂದರುಗಳು, ರೈಲ್ವೆ ನಿಲ್ದಾಣಗಳು, ಐತಿಹಾಸಿಕ ಸಂರಕ್ಷಿತ ಸ್ಮಾರಕಗಳಿಗೂ ಮತ್ತು ಅಣುಶಕ್ತಿ ಕೇಂದ್ರಗಳಿಗೂ ಭದ್ರತೆಯನ್ನು ಒದಗಿಸುತ್ತದೆ.

### ಸಹಾಯಕ ರಕ್ಷಣಾಪಡೆಗಳು

ದೇಶದಾದ್ಯಂತ ಯುವಕರಲ್ಲಿ ಸೇವೆ ಮತ್ತು ದೇಶಪ್ರೇಮವನ್ನು ಬೆಳೆಸಲು ಶಾಲಾ ಮತ್ತು ಕಾಲೇಜುಗಳಲ್ಲಿ ಅನೇಕ ಚಟುವಟಿಕೆಗಳನ್ನು ಹಮ್ಮಿಕೊಳ್ಳಲಾಗುತ್ತಿದೆ.ಇವುಗಳಲ್ಲಿ ಎನ್. ಸಿ. ಸಿ. ಒಂದು ಪ್ರಮುಖ ಚಟುವಟಿಕೆ.

**ಎನ್‌ಸಿಸಿ ನ್ಯಾಷನಲ್ ಕ್ಯಾಡೆಟ್ ಕಾರಪ್ಸ್(National Cadet Corps):**



ಸಾಮೂಹಿಕ ಜೀವನದ ಪ್ರಾಧಾನ್ಯತೆ, ನಾಯಕತ್ವ ಮುಂತಾದ ಗುಣಗಳನ್ನು ಎನ್‌ಸಿಸಿ ಕಲಿಸುತ್ತದೆ. ಈ ತರಬೇತಿ ಪಡೆದವರಿಗೆ ಸೇನೆಯನ್ನು ಸೇರಲು ವಿಶೇಷ ಆದ್ಯತೆಯನ್ನುನೀಡಲಾಗುತ್ತದೆ.ಉನ್ನತ ವ್ಯಾಸಂಗಕ್ಕೂ ವಿದ್ಯಾರ್ಥಿಗಳಿಗೆ ಇದರಿಂದ ಮೀಸಲಾತಿ ದೊರೆಯುತ್ತದೆ.ಶಾಲೆ ಮತ್ತು ಕಾಲೇಜುಗಳಲ್ಲಿ ಯುವಕರು ಮತ್ತು ಯುವತಿಯರು ಎನ್‌ಸಿಸಿಯನ್ನು ಸೇರಬಹುದು.ಒಟ್ಟಿನಲ್ಲಿ ರಾಷ್ಟ್ರ ರಕ್ಷಣೆಯ ಹೊಣೆಗಾರಿಕೆಯನ್ನು ಮೂಡಿಸುವುದು ಇದರ ಪ್ರಮುಖ ಗುರಿಯಾಗಿದೆ. ‘ಶಿಸ್ತು ಮತ್ತು ಒಗ್ಗಟ್ಟು’ ಇದರ ಧ್ಯೇಯ ವಾಕ್ಯವಾಗಿದೆ.

2012 ರಲ್ಲಿ ಭಾರತದ 610 ಜಿಲ್ಲೆಗಳಲ್ಲಿರುವ 8770 ಶಾಲೆಗಳು ಮತ್ತು 5521 ಕಾಲೇಜುಗಳಲ್ಲಿ ಎನ್‌ಸಿಸಿ ಘಟಕಗಳಿವೆ. ಒಟ್ಟು 13,00,000 ಎನ್‌ಸಿಸಿ ಕ್ಯಾಡೆಟ್‌ಗಳಿದ್ದಾರೆ.

**ಗೃಹರಕ್ಷಕ ದಳ (Home Guards):**

ಇದು ಪೊಲೀಸ್ ಪಡೆಗೆ ಪೂರಕವಾಗಿ ಕೆಲಸ ಮಾಡುತ್ತದೆ. ಇದರ ಕಾರ್ಯಗಳು: ಆಂತರಿಕ ಭದ್ರತೆ ಒದಗಿಸುವಲ್ಲಿ ನೆರವಾಗುವುದು ಮತ್ತು ತುರ್ತುಪರಿಸ್ಥಿತಿ, ಪ್ರಕೃತಿ ವಿಕೋಪ ಮುಂತಾದ ಸಮಯದಲ್ಲಿ ಸಹಾಯ ಮಾಡುವುದು.

**ನಾಗರಿಕ ಪೊಲೀಸ್ ಪಡೆಗಳು**:

ಪೊಲೀಸ್ ಪಡೆಗಳು ರಾಜ್ಯ ಹಾಗೂ ಕೇಂದ್ರ ಮಟ್ಟದಲ್ಲಿವೆ. ರಾಜ್ಯ ಪೊಲೀಸ್ ಪಡೆಯ ವ್ಯಾಪ್ತಿ ರಾಜ್ಯಕ್ಕೆ ಸೀಮಿತವಾಗಿದೆ. ಕೇಂದ್ರ ಸರಕಾರವು ತನ್ನದೇ ಪೊಲೀಸ್ ಪಡೆಗಳನ್ನು ಸ್ಥಾಪಿಸಿದೆ.

ರಾಷ್ಟ್ರೀಯ ರಕ್ಷಣಾ ದಳ: ರಾಷ್ಟ್ರೀಯ ರಕ್ಷಣಾ ದಳವು ಗಣ್ಯರಿಗೆ ರಕ್ಷಣೆಯನ್ನು ನೀಡುತ್ತದೆ. ಇದು ದೇಶದಲ್ಲಿಯ ಆಂತರಿಕ ಭದ್ರತೆಗೆ ಮತ್ತು ಭಯೋತ್ಪಾದನೆ ನಿಗ್ರಹಕ್ಕೆ ಹೆಚ್ಚು ಒತ್ತು ನೀಡುತ್ತದೆ. ಬಾಂಬ್ ನಿಷ್ಕ್ರಿಯ ದಳ ಇದಕ್ಕೆ ಪೂರಕವಾಗಿದೆ.

**ಭಾರತೀಯ ರೆಡ್‌ಕ್ರಾಸ್ ಸಂಸ್ಥೆ (Indian Red Cross Society):**

ರೆಡ್‌ಕ್ರಾಸ್ ಸಂಸ್ಥೆಯು ಭಾರತದಾದ್ಯಂತ 700 ಜಿಲ್ಲೆಗಳಲ್ಲಿ ತನ್ನ ಶಾಖೆಗಳನ್ನು ಹೊಂದಿ ಕಾರ್ಯನಿರ್ವಹಿಸುತ್ತಿದೆ. ರಾಷ್ಟ್ರಪತಿಗಳು ಇದರ ಅಧ್ಯಕ್ಷರಾಗಿದ್ದಾರೆ. ರೆಡ್‌ಕ್ರಾಸ್ ಸಂಸ್ಥೆಯ ಮುಖ್ಯ ಧ್ಯೇಯವೆಂದರೆ 'ಮಾನವೀಯತೆ ಮತ್ತು ಸ್ವಯಂಸೇವೆ'.



## ಗುಂಪುಗಳಲ್ಲಿ ಚರ್ಚಿಸಿ ಉತ್ತರಿಸಿ.

1. ರಕ್ಷಣಾಪಡೆಗಳ ಸರ್ವೋಚ್ಚ ಅಧಿಕಾರ ಯಾರಿಗೆ ನೀಡಲಾಗಿದೆ?
2. ರಕ್ಷಣಾಪಡೆಯ ವಿಭಾಗಗಳಾವುವು?
3. ಭೂಸೇನೆಯ ಮುಖ್ಯಸ್ಥರನ್ನು ಏನೆಂದು ಕರೆಯುವರು?
4. ಭೂಸೇನೆಯ ಆಡಳಿತ ಕಚೇರಿ ಎಲ್ಲಿದೆ?
5. ನೌಕಾದಳದ ಮುಖ್ಯಸ್ಥರನ್ನು ಏನೆಂದು ಕರೆಯುತ್ತಾರೆ?
6. ಎನ್‌ಸಿಸಿಯ ಧ್ಯೇಯ ವಾಕ್ಯ ಯಾವುದು?
7. ಭೂಸೇನೆಯ ಪ್ರಮುಖ ಕಾರ್ಯಗಳಾವುವು?
8. ಗಡಿರಸ್ತೆಗಳ ಸಂಘಟನೆಯ ಕಾರ್ಯಗಳಾವುವು?
9. ರೆಡ್‌ಕ್ರಾಸ್ ಸಂಸ್ಥೆಯ ಧ್ಯೇಯ ಯಾವುದು?
10. ರಕ್ಷಣಾಪಡೆಯಲ್ಲಿ ಸೇವೆ ಸಲ್ಲಿಸಲು ನಿನಗೆ ಇಚ್ಛೆಯಿದೆಯೆ? ಕಾರಣ ಕೊಡಿ.

**ಚರ್ಚಿಸಿ**

ನಾವೇಕೆ ರಕ್ಷಣಾಪಡೆಯಲ್ಲಿ ಸೇವೆ ಸಲ್ಲಿಸಬೇಕು?

**ಚಟುವಟಿಕೆಗಳು**

1. ನಿಮ್ಮ ಗ್ರಾಮದ ಸೈನಿಕರನ್ನು ಭೇಟಿ ಮಾಡಿ ಶಾಲೆಗೆ ಆಹ್ವಾನಿಸಿ.
2. ರಕ್ಷಣಾಪಡೆಗಳ ವಿವಿಧ ಘಟಕಗಳ ಚಿಹ್ನೆಗಳನ್ನು ಸಂಗ್ರಹಿಸಿ.
3. ಸಮೀಪದ ಶಾಲೆ ಕಾಲೇಜುಗಳಲ್ಲಿರುವ ಎನ್‌ಸಿಸಿ ಘಟಕಕ್ಕೆ ಭೇಟಿ ನೀಡಿ.

**ನಿಮಗೆ ತಿಳಿದಿರಲಿ:**

ಭೂಸೇನೆಯ ಉನ್ನತ ಅಧಿಕಾರಿಗಳು: ಜನರಲ್, ಲೆಫ್ಟಿನಂಟ್ ಜನರಲ್, ಮೇಜರ್ ಜನರಲ್, ಬ್ರಿಗೇಡಿಯರ್, ಕರ್ನಲ್, ಲೆಫ್ಟಿನಂಟ್ ಕರ್ನಲ್, ಮೇಜರ್, ಕ್ಯಾಪ್ಟನ್ ಮತ್ತು ಲೆಫ್ಟಿನಂಟ್. ನೌಕಾದಳ ಮತ್ತು ವಾಯುಪಡೆಯಲ್ಲಿ ಕೂಡ ಅದರದೇ ಆದ ಉನ್ನತ ಅಧಿಕಾರಿಗಳ ರ್ಯಾಂಕ್‌ಗಳಿವೆ.

## ಪಾಠ- 22: ಸಂವಿಧಾನ ತಿದ್ದುಪಡಿ

**ಪಾಠದ ಪರಿಚಯ**

ಭಾರತ ಸಂವಿಧಾನವನ್ನು ತಿದ್ದುಪಡಿ ಮಾಡುವ ವಿಧಾನಗಳ ಕುರಿತು ವಿವರಣೆ ನೀಡಲಾಗಿದೆ

### ಸಾಮರ್ಥ್ಯಗಳು

1. ಭಾರತ ಸಂವಿಧಾನದ ಸ್ವರೂಪವನ್ನು ಅರಿಯುವುದು
2. ಭಾರತದ ಸಂವಿಧಾನ ತಿದ್ದುಪಡಿ ಮಾಡುವ ವಿಧಾನಗಳನ್ನು ತಿಳಿಯುವುದು
3. ಸರಳ ಬಹುಮತದಿಂದ ತಿದ್ದುಪಡಿ ಮಾಡುವ ವಿಧಾನವನ್ನು ಅರ್ಥ ಮಾಡಿಕೊಳ್ಳುವುದು
4. ವಿಶೇಷ ಬಹುಮತದಿಂದ ತಿದ್ದುಪಡಿ ಮಾಡುವ ವಿಧಾನವನ್ನು ಅರ್ಥೈಸಿಕೊಳ್ಳುವುದು
5. ವಿಶೇಷ ಬಹುಮತದೊಂದಿಗೆ ಅರ್ಧದಷ್ಟು ರಾಜ್ಯಗಳ ಒಪ್ಪಿಗೆಯಿಂದ ತಿದ್ದುಪಡಿ ಮಾಡುವ ವಿಧಾನದ ಬಗ್ಗೆ ತಿಳಿಯುವುದು

ಸಂವಿಧಾನಿಕ ಕಾನೂನಿಗೆ ಸ್ಥಿರತೆ ಒಂದು ಅವಶ್ಯಕ ಲಕ್ಷಣವಾದರೂ ನಿರಂತರವಾಗಿ ನಡೆಯುವ ಸಾಮಾಜಿಕ ಬದಲಾವಣೆ ಹಾಗೂ ಬದಲಾದ ಪರಿಸ್ಥಿತಿಗೆ ಹೊಂದಿಕೊಳ್ಳಲು ಸಂವಿಧಾನಕ್ಕೆ ತಿದ್ದುಪಡಿಯ ಅವಶ್ಯಕತೆ ಇದೆ.

### ಸಂವಿಧಾನದ ಸ್ವರೂಪ

ತಿದ್ದುಪಡಿಗಳ ಆಧಾರದ ಮೇಲೆ ಸಂವಿಧಾನಗಳ ಸ್ವರೂಪವನ್ನು ನಿರ್ಧರಿಸಬಹುದು. ತಿದ್ದುಪಡಿ ವಿಧಾನವು ಸುಲಭವಾಗಿದ್ದರೆ ಅಂತಹ ಸಂವಿಧಾನವನ್ನು ಸರಳ ಸಂವಿಧಾನವೆಂದು, ತಿದ್ದುಪಡಿ ವಿಧಾನವು ಕ್ಲಿಷ್ಟಕರವಾಗಿದ್ದರೆ ಅಂತಹ ಸಂವಿಧಾನವನ್ನು ಕಠಿಣ ಸಂವಿಧಾನವೆಂದು ವಿಂಗಡಿಸಬಹುದು. ಭಾರತದ ಸಂವಿಧಾನವು ಸರಳ ಹಾಗೂ ಕಠಿಣ ಎರಡೂ ಅಂಶಗಳನ್ನು ಒಳಗೊಂಡಿದೆ.

## ಸಂವಿಧಾನ ತಿದ್ದುಪಡಿ ವಿಧಾನಗಳು

ನಮ್ಮ ಸಂವಿಧಾನವನ್ನು ಮೂರು ವಿಧಾನಗಳ ಮೂಲಕ ತಿದ್ದುಪಡಿ ಮಾಡಬಹುದು. ಅವುಗಳೆಂದರೆ:

1. ಸರಳ ಬಹುಮತ ತಿದ್ದುಪಡಿ ವಿಧಾನ
2. ವಿಶೇಷ ಬಹುಮತ ತಿದ್ದುಪಡಿ ವಿಧಾನ
3. ವಿಶೇಷ ಬಹುಮತದೊಂದಿಗೆ ಕನಿಷ್ಠ ಅರ್ಧದಷ್ಟು ರಾಜ್ಯಗಳ ಒಪ್ಪಿಗೆ ಪಡೆದು ತಿದ್ದುಪಡಿ ಮಾಡುವ ವಿಧಾನ ಮೇಲೆ ತಿಳಿಸಿರುವ ತಿದ್ದುಪಡಿ ವಿಧಾನಗಳ ವಿವರಣೆ ಕೆಳಕಂಡಂತಿವೆ;




**ಸರಳ ಬಹುಮತ ತಿದ್ದುಪಡಿ ವಿಧಾನ**

ಸಂವಿಧಾನದ ಕೆಲವು ಭಾಗಗಳನ್ನು ಸಂಸತ್ತಿನ (ಲೋಕ ಸಭೆ ಹಾಗೂ ರಾಜ್ಯ ಸಭೆ ಎರಡೂ ಸದನಗಳು) ಸಾಮಾನ್ಯ ಶಾಸನೀಯ ಪ್ರಕ್ರಿಯೆಯ ಸರಳ ಬಹುಮತದ (ಸಂಸತ್ತಿನ ಸದಸ್ಯರಲ್ಲಿ ಅರ್ಧಕ್ಕಿಂತ ಹೆಚ್ಚು ಸದಸ್ಯರ ಒಪ್ಪಿಗೆ) ಮೂಲಕ ತಿದ್ದುಪಡಿ ಮಾಡಬಹುದು. ಉದಾ: ಭಾರತೀಯ ನಾಗರೀಕತ್ವದ ಅರ್ಹತೆಗಳು.

## ವಿಶೇಷ ಬಹುಮತ ತಿದ್ದುಪಡಿ ವಿಧಾನ

ಸಂವಿಧಾನದ ಕೆಲವು ಭಾಗಗಳನ್ನು ಸಂಸತ್ತಿನ ವಿಶೇಷ ಬಹುಮತದ ಮೂಲಕ ತಿದ್ದುಪಡಿ ಮಾಡಬಹುದು. ವಿಶೇಷ ಬಹುಮತ ಎಂದರೆ ಸಂಸತ್ತಿನ ಸದಸ್ಯರಲ್ಲಿ ಮೂರನೇ ಎರಡು ಭಾಗದಷ್ಟು ಸದಸ್ಯರು ಒಪ್ಪಿಗೆ ಸೂಚಿಸಿ ಸಂವಿಧಾನಕ್ಕೆ ತಿದ್ದುಪಡಿ ಮಾಡಬಹುದು. ಉದಾ: ಮೂಲಭೂತ ಹಕ್ಕುಗಳು, ರಾಜ್ಯ ನಿರ್ದೇಶಕ ತತ್ವಗಳು ಹಾಗೂ ಇತರ ಅಂಶಗಳು.

## ವಿಶೇಷ ಬಹುಮತದೊಂದಿಗೆ ಕನಿಷ್ಠ ಅರ್ಧದಷ್ಟು ರಾಜ್ಯಗಳ ಒಪ್ಪಿಗೆ ಪಡೆದು ತಿದ್ದುಪಡಿ ಮಾಡುವ ವಿಧಾನ

ಸಂಸತ್ತಿನ ವಿಶೇಷ ಬಹುಮತದೊಂದಿಗೆ ಅರ್ಧದಷ್ಟು ರಾಜ್ಯಗಳ ಒಪ್ಪಿಗೆ ಪಡೆದು ಸಂವಿಧಾನದ ಕೆಲವು ಭಾಗಗಳನ್ನು ತಿದ್ದುಪಡಿ ಮಾಡಬಹುದು. ಇದು ಮೇಲೆ ತಿಳಿಸಿರುವ ಎರಡೂ ವಿಧಾನಗಳಿಗಿಂತಲೂ ಕಠಿಣವಾದ ವಿಧಾನವಾಗಿದೆ. ಈ ವಿಧಾನದಿಂದ ರಾಷ್ಟ್ರಪತಿಗಳ ಚುನಾವಣೆ, ಕೇಂದ್ರ ಹಾಗೂ ರಾಜ್ಯ ಸರ್ಕಾರಗಳ ನಡುವೆ ಅಧಿಕಾರ ಹಂಚಿಕೆ ಹಾಗೂ ಇತರ ಅಂಶಗಳನ್ನು ತಿದ್ದುಪಡಿ ಮಾಡಬಹುದು.

ಹೀಗೆ ಮೂರು ತಿದ್ದುಪಡಿ ವಿಧಾನಗಳ ಮೂಲಕ ಭಾರತದ ಸಂವಿಧಾನಕ್ಕೆ ಅಗತ್ಯ ಬದಲಾವಣೆಗಳನ್ನು ಮಾಡಬಹುದಾಗಿದೆ. ಬದಲಾದ ಸಮಾಜ ಹಾಗೂ ಸನ್ನಿವೇಶಕ್ಕೆ ತಕ್ಕಂತೆ ಸೂಕ್ತ ಬದಲಾವಣೆಗಳನ್ನು ತರಲು ಸಂವಿಧಾನದಲ್ಲಿ ಅವಕಾಶವನ್ನು ಕಲ್ಪಿಸಲಾಗಿದೆ.

ಸೆಪ್ಟಂಬರ್ 8, 2016 ರವರೆಗೆ ನಮ್ಮ ಸಂವಿಧಾನವನ್ನು 101 ಬಾರಿ ತಿದ್ದುಪಡಿ ಮಾಡಲಾಗಿದೆ.

### ಗುಂಪುಗಳಲ್ಲಿ ಚರ್ಚಿಸಿ ಉತ್ತರಿಸಿ.

1. ಸಂವಿಧಾನ ತಿದ್ದುಪಡಿ ಎಂದರೇನು?
2. ಭಾರತದ ಸಂವಿಧಾನ ತಿದ್ದುಪಡಿ ವಿಧಾನಗಳಾವುವು?
3. ಸರಳ ಬಹುಮತ ತಿದ್ದುಪಡಿ ವಿಧಾನವೆಂದರೇನು?
4. ವಿಶೇಷ ಬಹುಮತ ತಿದ್ದುಪಡಿ ವಿಧಾನವನ್ನು ತಿಳಿಸಿ.
5. ಭಾರತ ಸಂವಿಧಾನವನ್ನು ತಿದ್ದುಪಡಿ ಮಾಡುವ ಮೂರನೇ ವಿಧಾನವನ್ನು ವಿವರಿಸಿ.

## ಚರ್ಚಿಸಿ

1. ಸಂವಿಧಾನಕ್ಕೆ ತಿದ್ದುಪಡಿ ಏಕೆ ಅವಶ್ಯಕ ಎಂಬ ವಿಷಯವಾಗಿ ಚರ್ಚಿಸಿ.

## ಭೂಗೋಳ ವಿಜ್ಞಾನ ಪಾಠ- 23: ಉತ್ತರ ಅಮೆರಿಕ-ಪ್ರೈರೀಸ್‌ಗಳ ನಾಡು

### ಪಾಠದ ಪರಿಚಯ

ಕಳೆದ ವರ್ಷ ನೀವು ಏಷ್ಯ, ಯುರೋಪ್ ಮತ್ತು ಆಫ್ರಿಕ ಖಂಡಗಳ ಭೌಗೋಳಿಕ ಲಕ್ಷಣಗಳು ಮತ್ತು ಅವುಗಳ ಪ್ರಾಮುಖ್ಯತೆಯ ಬಗ್ಗೆ ಅಧ್ಯಯನ ಮಾಡಿದ್ದೀರಿ. ಈ ವರ್ಷ ನೀವು ಉತ್ತರ ಅಮೆರಿಕ, ದಕ್ಷಿಣ ಅಮೆರಿಕ, ಆಸ್ಟ್ರೇಲಿಯ ಮತ್ತು ಅಂಟಾರ್ಕ್ಟಿಕ್ ಖಂಡಗಳ ಬಗ್ಗೆ ಹೆಚ್ಚಿನ ಮಾಹಿತಿಯನ್ನು ಅರಿಯುವಿರಿ.

ಈ ಪಾಠದಲ್ಲಿ ಉತ್ತರ ಅಮೆರಿಕ ಖಂಡದ ಸ್ಥಾನ, ವಿಸ್ತೀರ್ಣ, ಭೌಗೋಳಿಕ ಸನ್ನಿವೇಶ, ಪ್ರಾಕೃತಿಕ ವಿಭಾಗಗಳು, ವಾಯುಗುಣ ಮತ್ತು ಸ್ವಾಭಾವಿಕ ಸಸ್ಯವರ್ಗ, ವ್ಯವಸಾಯ, ಪ್ರಮುಖ ಖನಿಜಗಳು ಹಾಗೂ ಕೈಗಾರಿಕೆಗಳು, ಜನಸಂಖ್ಯೆಯ ಬೆಳವಣಿಗೆ, ಹಂಚಿಕೆ ಮತ್ತು ಸಾಂದ್ರತೆಗಳನ್ನು ಪರಿಚಯಿಸಲಾಗಿದೆ.

### ಸಾಮರ್ಥ್ಯಗಳು

1. ಉತ್ತರ ಅಮೆರಿಕದ ಸ್ಥಾನ, ವಿಸ್ತೀರ್ಣ ಹಾಗೂ ಭೌಗೋಳಿಕ ಸನ್ನಿವೇಶಗಳನ್ನು ತಿಳಿಯುವರು.
2. ಉತ್ತರ ಅಮೆರಿಕದ ಪ್ರಾಕೃತಿಕ ವಿಭಾಗಗಳ ವೈವಿಧ್ಯವನ್ನು ಹೋಲಿಕೆ ಮಾಡಿ ಅರಿಯುವರು.
3. ಉತ್ತರ ಅಮೆರಿಕದ ನದಿ ಹಾಗೂ ಮಹಾಸರೋವರಗಳ ಬಗ್ಗೆ ತಿಳಿದುಕೊಳ್ಳುವರು.
4. ಉತ್ತರ ಅಮೆರಿಕದ ವೈವಿಧ್ಯ ವಾಯುಗುಣವು ಸ್ವಾಭಾವಿಕ ಸಸ್ಯವರ್ಗ ಹಾಗೂ ಪ್ರಾಣಿವರ್ಗಗಳ ಮೇಲೆ ಬೀರುವ ಪ್ರಭಾವವನ್ನು ತಿಳಿದುಕೊಳ್ಳುವರು.
5. ಉತ್ತರ ಅಮೆರಿಕದಲ್ಲಿನ ವ್ಯವಸಾಯದ ಅಭಿವೃದ್ಧಿಯನ್ನು ಅರಿತುಕೊಳ್ಳುವರು.
6. ಪ್ರಮುಖ ಖನಿಜಗಳ ಸಮೃದ್ಧಿಯನ್ನು ಬಳಸಿಕೊಂಡು ಉತ್ತರ ಅಮೆರಿಕವು ಹೇಗೆ ಕೈಗಾರಿಕಾ ಅಭಿವೃದ್ಧಿಯನ್ನು ಹೊಂದಿದೆ ಎಂಬುದನು ತಿಳಿಯುವರು.
7. ಉತ್ತರ ಅಮೆರಿಕದ ಜನಸಂಖ್ಯೆಯ ಮೂಲ, ಸಾಂದ್ರತೆ ಹಾಗೂ ಹಂಚಿಕೆಗಳನ್ನು ತಿಳಿಯುವರು.

ಉತ್ತರ ಅಮೆರಿಕವು ಇತ್ತೀಚೆಗೆ ಕಂಡುಹಿಡಿದ ಖಂಡವಾಗಿದೆ. 1501 ರಲ್ಲಿ ಇಟಲಿಯ ನಾವಿಕ ಅಮೆರಿಗೊ ವೆಸ್‌ಪುಸಿ ಈ ಖಂಡದ ಕರಾವಳಿಯನ್ನು ತಲುಪಿದನು. ಅನಂತರ ಈ ಖಂಡವನ್ನು ಆತನ ಹೆಸರಿನ ಮೊದಲ ಪದ ‘ಅಮೆರಿಕಗೊ’ ದಿಂದ ‘ಅಮೆರಿಕಾ’ ಎಂದು

ಕರೆಯಲಾಗಿದೆ. ಈ ಖಂಡದಲ್ಲಿನ ಬಹುತೇಕ ನಿವಾಸಿಗಳು ಯುರೋಪಿಯನರು ಮತ್ತು ಇತರ ದೇಶಗಳಿಂದ ವಲಸೆ ಬಂದವರಾಗಿದ್ದಾರೆ. ಅವರು ಮೆಕ್ಸಿಕೊದ ಚಿನ್ನವನ್ನು ಬಳಕೆ ಮಾಡಿದರೆ, ಫ್ರೆಂಚರು ಕೆನಡದಲ್ಲಿ ತುಪ್ಪಳ (fur) ವ್ಯಾಪಾರವನ್ನು ಲಾಭದಾಯಕವಾಗಿ ಮಾಡಿಕೊಂಡರು. ಬ್ರಿಟಿಷರು ಕೆನಡದ ಅಟ್ಲಾಂಟಿಕ್ ಪ್ರಾಂತ್ಯ ಮತ್ತು ನ್ಯೂಇಂಗ್ಲೆಂಡ್‌ನ ಮೀನುಗಾರಿಕೆ ಮತ್ತು ಅಲ್ಲಿನ ಅರಣ್ಯವನ್ನು ಲೂಟಿಮಾಡಿದರು.

ಉತ್ತರ ಅಮೆರಿಕದ ಹೇರಳವಾದ ಸಂಪನ್ಮೂಲಗಳು ಅಲ್ಲಿನ ವಿಜ್ಞಾನ ಮತ್ತು ತಂತ್ರಜ್ಞಾನದ ಅಭಿವೃದ್ಧಿಗೆ ತಳಹದಿಯಾಗಿವೆ. ವಿಸ್ತಾರವಾದ ಸ್ಥಳೀಯ ಮಾರುಕಟ್ಟೆ, ಅಂತಾರಾಷ್ಟ್ರೀಯ ವ್ಯಾಪಾರ ಸಂಬಂಧ, ಉತ್ತಮ ಸಾರಿಗೆ ಮುಂತಾದವುಗಳಿಂದ ಉತ್ತರ ಅಮೆರಿಕವು ಜಗತ್ತಿನ ಅತಿ ಶ್ರೀಮಂತ ಮತ್ತು ಆರ್ಥಿಕವಾಗಿ ಪ್ರಾಬಲ್ಯ ಹೊಂದಿದ ಖಂಡಗಳಲ್ಲೊಂದಾಗಿದೆ. ಈ ಖಂಡವನ್ನು ಮಾದರಿಯಾಗಿಟ್ಟುಕೊಂಡು ಇತರ ಖಂಡಗಳೊಡನೆ ಹೋಲಿಕೆ ಮಾಡಿ ಅರ್ಥಮಾಡಿಕೊಳ್ಳುವುದು ಅಗತ್ಯವಾಗಿದೆ.

## 1. ಸ್ಥಾನ, ಭೌಗೋಳಿಕ ಸನ್ನಿವೇಶ ಮತ್ತು ವಿಸ್ತೀರ್ಣ

**ಸ್ಥಾನ:**

ಉತ್ತರ ಅಮೆರಿಕವು ಸಂಪೂರ್ಣವಾಗಿ ಸಮಭಾಜಕವೃತ್ತದ ಉತ್ತರದಲ್ಲಿ ನೆಲೆಗೊಂಡಿದೆ. ಅದು ಅಕ್ಷಾಂಶಿಕವಾಗಿ $19^0$ ಉತ್ತರ ದಿಂದ $71^0$ ಉತ್ತರ ಅಕ್ಷಾಂಶ, $50^0$ ಪಶ್ಚಿಮದಿಂದ, $150^0$ ಪಶ್ಚಿಮ ರೇಖಾಂಶಗಳ ನಡುವೆ ಹಬ್ಬಿದೆ. ಕರ್ಕಾಟಕ ಸಂಕ್ರಾಂತಿ ವೃತ್ತವು ($2312^0$ ಉ. ಅ) ಈ

ಖಂಡದ ದಕ್ಷಿಣದಲ್ಲಿಯೂ ಉತ್ತರ ಮೇರು ವೃತ್ತವು ($66^{\circ}12^{0}$ ಉ. ಆರ್ಕ್ಟಿಕ್ ವೃತ್ತ) ಉತ್ತರ ಭಾಗದಲ್ಲಿ ಹಾದು ಹೋಗಿವೆ.

**ಭೌಗೋಳಿಕ ಸನ್ನಿವೇಶ:**

ಉತ್ತರ ಅಮೆರಿಕವು ಪೂರ್ವದಲ್ಲಿ ಅಟ್ಲಾಂಟಿಕ್ ಮಹಾಸಾಗರ, ಪಶ್ಚಿಮದಲ್ಲಿ ಫೆಸಿಫಿಕ್ ಮಹಾಸಾಗರ ಮತ್ತು ಉತ್ತರದಲ್ಲಿ ಆರ್ಕ್ಟಿಕ್ (ಉತ್ತರ ಶೀತ) ಸಾಗರದಿಂದ ಸುತ್ತುವರಿದಿದೆ. ಬೇರಿಂಗ್ ಜಲಸಂಧಿಯು ಇದನ್ನು ಏಷ್ಯ ಖಂಡದಿಂದ ಪ್ರತ್ಯೇಕಿಸಿದೆ. ಪನಾಮ ಭೂಕಂಠದಿಂದಾಗಿ ಇದು ದಕ್ಷಿಣ ಅಮೆರಿಕದೊಂದಿಗೆ ಭೂಸಂಪರ್ಕವನ್ನು ಹೊಂದಿತ್ತು. ಈಗ ಅದು ಪನಾಮ ಕಾಲುವೆಯಿಂದ ಪ್ರತ್ಯೇಕಗೊಂಡಿದೆ. ಅಸಂಖ್ಯಾತ ಸಣ್ಣ ಸಣ್ಣ ಜಲಭಾಗಗಳನ್ನು ಇಲ್ಲಿ ಕಾಣಬಹುದು. ಉದಾ:- ಮೆಕ್ಸಿಕೊ ಖಾರಿ, ಹಡ್ಸನ್ ಕೊಲ್ಲಿ, ಅಲಾಸ್ಕ ಖಾರಿ, ಕ್ಯಾಲಿಫೋರ್ನಿಯ ಖಾರಿ ಇತ್ಯಾದಿ. ವೆಸ್ಟ್ ಇಂಡಿಸ್ ಮತ್ತು ಕ್ಯೂಬಾ ದ್ವೀಪಗಳನ್ನು ಕೆರಬಿಯನ್ ಸಮುದ್ರದಲ್ಲಿ ಕಾಣಬಹುದು. ಕೆನಡದ ಪೂರ್ವ ಕರಾವಳಿಯಲ್ಲಿ ನ್ಯೂಫೌಂಡ್‌ಲ್ಯಾಂಡ್ ಪ್ರದೇಶವಿದೆ. ಆರ್ಕ್ಟಿಕ್ ಮಹಾಸಾಗರದಲ್ಲಿ ಅಸಂಖ್ಯಾತ ದ್ವೀಪಗಳಿದ್ದು, ಅವುಗಳಲ್ಲಿ ಗ್ರೀನ್‌ಲ್ಯಾಂಡ್ ಅತಿ ದೊಡ್ಡದಾಗಿದೆ. ಉತ್ತರ ಅಮೆರಿಕದ ದಕ್ಷಿಣದಲ್ಲಿರುವ ಅಂಚಿನ ಭೂಭಾಗವನ್ನು ಮಧ್ಯ ಅಮೆರಿಕವೆಂದು ಕರೆಯಲಾಗಿದೆ.

**ವಿಸ್ತೀರ್ಣ:**

ಉತ್ತರ ಅಮೆರಿಕವು ವಿಸ್ತೀರ್ಣದಲ್ಲಿ (16.46%) ಏಷ್ಯ ಮತ್ತು ಆಫ್ರಿಕಗಳ ನಂತರ ಮೂರನೇ ಅತಿ ದೊಡ್ಡ ಭೂಖಂಡವಾಗಿದೆ (24.24 ದಶಲಕ್ಷ ಚ. ಕಿ. ಮೀ). ಇದು ಭಾರತಕ್ಕಿಂತ ಸುಮಾರು ಏಳು ಪಟ್ಟು ದೊಡ್ಡದಾಗಿದೆ. ಉತ್ತರ ಅಮೆರಿಕದಲ್ಲಿ 24 ರಾಜ್ಯಗಳಿವೆ. ಕೆನಡ, ಅಮೆರಿಕ ಸಂಯುಕ್ತ ಸಂಸ್ಥಾನ ಮತ್ತು ಮೆಕ್ಸಿಕೋ ಈ ಮೂರು ರಾಜ್ಯಗಳು ಗಾತ್ರದಲ್ಲಿ ದೊಡ್ಡದಾಗಿವೆ. ಉತ್ತರ ಅಮೆರಿಕದ ಭೌಗೋಳಿಕ ಪ್ರದೇಶದಲ್ಲಿ ಕೆರಿಬಿಯನ್ ದ್ವೀಪಗಳೂ ಸೇರಿವೆ.

**ನಿಮಗಿದು ತಿಳಿದಿದೆಯೇ?**

| **ದೇಶಗಳು** | **ಅವುಗಳ ವಿಶೇಷತೆ** |
|---|---|
| ಕೆನಡ | ಟ್ರಾನ್ಸ್‌ಕೆನಡಿಯನ್ ರೈಲ್ವೆ |

| | |
|---|---|
| ಯು. ಎಸ್. ಎ. | ಗ್ರ್ಯಾಂಡ್ ಕ್ಯಾನಿಯನ್, ಹೋಮ್ಸ್ ಸರೋವರಗಳು, ಬಾರ್ ರಿಂಗರ್ ಕ್ರೇಟರ್, ವಾಲ್ಕನಾಸ್ |
| ವೆಸ್ಟ್ ಇಂಡಿಸ್ | ಕ್ರಿಕೆಟ್, ದ್ವೀಪಗಳು |

## 2. ಪ್ರಾಕೃತಿಕ ವಿಭಾಗಗಳು

ಉತ್ತರ ಅಮೆರಿಕ ಖಂಡವನ್ನು ನಾಲ್ಕು ಮುಖ್ಯ ಪ್ರಾಕೃತಿಕ ವಿಭಾಗಗಳಾಗಿ ವಿಂಗಡಿಸಲಾಗಿದೆ.

ಅವುಗಳೆಂದರೆ

1. ಪಶ್ಚಿಮದ ಪರ್ವತಾವಳಿಗಳು (ರಾಕಿ ಪರ್ವತಗಳು)
2. ಕೇಂದ್ರದ ಮಹಾ ಮೈದಾನಗಳು
3. ಪೂರ್ವದ ಉನ್ನತ ಪ್ರದೇಶಗಳು/ ಅಪಲೇಷಿಯನ್ ಪರ್ವತಗಳು
4. ಕರಾವಳಿ ಪ್ರದೇಶ



ಉತ್ತರ ಅಮೆರಿಕ ಪ್ರಾಕೃತಿಕ ವಿಭಾಗಗಳು

### *1. ಪಶ್ಚಿಮದ ಪರ್ವತಾವಳಿಗಳು*

ಇವು ಹಿಮಾಲಯ ಪರ್ವತಗಳಂತೆ ಮಡಿಕೆ ಪರ್ವತ ಶ್ರೇಣಿಗಳಾಗಿವೆ. ಪಶ್ಚಿಮದ ಈ ಪರ್ವತಾವಳಿಗಳು ಉತ್ತರದಲ್ಲಿ ಅಲಾಸ್ಕದಿಂದ ದಕ್ಷಿಣದಲ್ಲಿ ಪನಾಮದವರೆಗೂ ಹಬ್ಬಿವೆ. ಅವು ಅನೇಕ ಸರಣಿ ಸಮಾನಾಂತರ ಪರ್ವತ ಸರಣಿಗಳಿಂದ ಕೂಡಿದ್ದು, ಅವುಗಳ ನಡುವೆ ಅಂತರ್ ಮೈದಾನ ಮತ್ತು ಪ್ರಸ್ಥಭೂಮಿಗಳಿವೆ.

ಇವುಗಳ ಎತ್ತರವು ಅಲಾಸ್ಕದೆಡೆಗೆ ಹೋದಂತೆ ಕಡಿಮೆಯಾಗುತ್ತದೆ ಮತ್ತು ಮೆಕ್ಸಿಕೊ ಕಡೆಗೆ ಹೋದಂತೆ ಹೆಚ್ಚಾಗುತ್ತದೆ. ಪಶ್ಚಿಮದ ಪರ್ವತಾವಳಿಗಳಲ್ಲಿ ರಾಕಿ ಪರ್ವತಗಳು ಅತಿ ಪ್ರಮುಖವಾದ ಸರಣಿಗಳಾಗಿವೆ. ಈ ಪ್ರದೇಶದಲ್ಲಿ ಮೌಂಟ್ ಮ್ಯಾಕ್‌ಕಿನ್ಲೆ (6194 ಮೀ) ಅತಿ ಎತ್ತರವಾದ ಶಿಖರವಾಗಿದ್ದರೆ, ಮೃತ್ಯುಕಣಿವೆಯು (ಸಮುದ್ರ ಮಟ್ಟದಿಂದ 86 ಮೀ.ನಷ್ಟು ತಗ್ಗಾದ) ಅತಿ ತಗ್ಗಾದ ಭಾಗವಾಗಿದೆ. ಕಾಸ್ಕೇಡ್ ಮತ್ತು ಸಿಯೆರ್ರಾ ನಿವೇಡಗಳು ಇತರ ಪರ್ವತ ಸರಣಿಗಳು. ಕ್ಯಾಲಿಫೋರ್ನಿಯದಲ್ಲಿರುವ ವೈಟ್ನೀ ಪರ್ವತ ಮತ್ತು ಶ್ವೇತ ಪರ್ವತಗಳು ತಮ್ಮದೇ ಆದ ಏರಿಳಿತ ಲಕ್ಷಣಗಳನ್ನು ಹೊಂದಿದ್ದು, ಅವು ಪ್ರಕೃತಿ ಸೌಂದರ್ಯಕ್ಕೆ ಹೆಸರುವಾಸಿಯಾಗಿವೆ. ಈ ಸರಣಿಗಳ ಮಧ್ಯೆ ಕೆಲವು ಅಂತರ್ಪರ್ವತ ಪ್ರಸ್ಥಭೂಮಿಗಳನ್ನು ಕಾಣಬಹುದು. ಅವುಗಳಲ್ಲಿ ಕೊಲಂಬಿಯ. ಕೊಲರಾಡೊ ಮತ್ತು ಮೆಕ್ಸಿಕನ್ ಪ್ರಸ್ಥಭೂಮಿಗಳು ಪ್ರಮುಖವಾದವುಗಳಾಗಿವೆ. ಕೊಲರಾಡೊ ನದಿಯು ಕೊಲರಾಡೊ ಪ್ರಸ್ಥಭೂಮಿಯನ್ನು ತನ್ನ ಅಪಾರ ಸವಕಳಿಯ ಮೂಲಕ 'ಮಹಾ ಕಂದರ' (ಗ್ರ್ಯಾಂಡ್ ಕ್ಯಾನಿಯನ್) ವನ್ನು ನಿರ್ಮಾಣಕ್ಕೆ ಕಾರಣವಾಗಿದೆ.







**ಓಲ್ಡ್ ಫೇಥ್‌ಫುಲ್ ಎಂಬುದು** - ಪ್ರಪಂಚದ ಹೆಸರಾಂತ ಗೈಸರ್ (ಬಿಸಿ ನೀರಿನ ಬುಗ್ಗೆ) ಆಗಿದ್ದು ಅಮೆರಿಕ ಸಂಯುಕ್ತ ಸಂಸ್ಥಾನದ ಯೆಲ್ಲೋಸ್ಟೋನ್ ರಾಷ್ಟ್ರೀಯ ಉದ್ಯಾನವನದಲ್ಲಿದೆ.



## *2. ಕೇಂದ್ರೀಯ ಮಹಾ ಮೈದಾನಗಳ*

ಕೇಂದ್ರೀಯ ಮೈದಾನಗಳನ್ನು ಪ್ರೈರೀಸ್ ನ ಮಹಾಮೈದಾನಗಳೆಂದೂ ಕರೆಯಲಾಗಿದೆ, ಅವುಗಳು ಪೂರ್ವದಲ್ಲಿ ಅಪಲೇಷಿಯನ್ ಪರ್ವತ ಮತ್ತು ಪಶ್ಚಿಮದಲ್ಲಿ ಪರ್ವತಾವಳಿಗಳ ಮಧ್ಯೆ ಕಂಡುಬರುತ್ತವೆ. ಈ ಮೈದಾನಗಳು ಹೆಚ್ಚು ವಿಸ್ತಾರವಾಗಿದ್ದು (ಉತ್ತರ ಅಮೆರಿಕದ ಒಟ್ಟು ಭೂಭಾಗದ 3/ 5 ರಷ್ಟು) ಸಮತಟ್ಟಾದ ಲಕ್ಷಣದಿಂದ ಸಾಧಾರಣ ಇಳಿಜಾರುವಿನಿಂದ ಕೂಡಿವೆ. ಈ ಮೈದಾನಗಳು ಮಿಸಿಸಿಪ್ಪಿ ಮತ್ತು ಮಿಸೌರಿ ನದಿಗಳು ಮತ್ತು ಅವುಗಳ ಉಪನದಿಗಳಿಂದ ನಿರ್ಮಾಣವಾಗಿವೆ. ಇದು ಪ್ರಪಂಚದ ಅತಿ ಫಲವತ್ತಾದ ಮೈದಾನಗಳಲ್ಲೊಂದಾಗಿದ್ದು, ಉತ್ತಮ ಕೃಷಿ ಪ್ರದೇಶವಾಗಿದೆ. ಈ ಪ್ರದೇಶದ ಉತ್ತರ ಭಾಗವು ಹಿಮಹಾಳೆಗಳಿಂದ (ಹಿಮನದಿ) ಭೂನಗ್ನೀಕರಣಕ್ಕೆ ಒಳಗಾಗಿರುವ ಕಾರಣದಿಂದಾಗಿ ಅಧಿಕ ಸಂಖ್ಯೆಯ ಬಯಲುಗಳು ನಿರ್ಮಾಣಗೊಂಡಿವೆ. ಈ ಬಯಲುಗಳು ಸರೋವರಗಳಿಂದ ಸುತ್ತುವರೆದಿವೆ.

ಧೂಳಿನ ಸುಂಟರಗಾಳಿ (ಭೋಗುಣಿ) (Dust Bowl) ಅವೈಜ್ಞಾನಿಕ ಸಾಗುವಳಿಯಿಂದ 1930 ರ ದಶಕದಲ್ಲಿ ಉಂಟಾದ ಬಿರುಗಾಳಿಗೆ ಧೂಳಿನ ಸುಂಟರಗಾಳಿ ಎನ್ನುವರು. ಇದು ಅಮೆರಿಕ ಮತ್ತು ಕೆನಡದ ಕೃಷಿ ಭೂಮಿಗೆ ಅಪಾರ ಹಾನಿಯನ್ನುಂಟು ಮಾಡಿತು.

### *3. ಪೂರ್ವದ ಉನ್ನತ ಪ್ರದೇಶಗಳು/ ಅಪಲೇಷಿಯನ್ ಪರ್ವತಗಳು*

ಪೂರ್ವದ ಉನ್ನತ ಪ್ರದೇಶಗಳನ್ನು ಅಪಲೇಷಿಯನ್ ಪರ್ವತಗಳೆಂದೂ ಕರೆಯಲಾಗುತ್ತದೆ. ಇವುಗಳು ಭೂಖಂಡದ ಪೂರ್ವ ಅಂಚಿನುದ್ದಕ್ಕೂ ನ್ಯೂಫೌಂಡ್‌ಲಾಂಡ್ ಪ್ರದೇಶದಿಂದ ಅಲಬಾಮದವರೆಗೂ ವಿಸ್ತರಿಸಿವೆ. ಅಪಲೇಷಿಯನ್‌ಗಳು ಪ್ರಾಚೀನ ಮಡಿಕೆ ಪರ್ವತಗಳಾಗಿದ್ದು ಭೂನಗ್ನೀಕರಣಕ್ಕೊಳಗಾಗಿದ್ದು ಅವು ಇಂದು ಪ್ರಸ್ತುತ ಎತ್ತರವನ್ನು ಹೊಂದಿವೆ.



ಅಪಲೇಷಿಯನ್ ಮಡಿಕೆ ಪರ್ವತಗಳು ಅಪಲೇಷಿಯನ್ ಸರಣಿಗಳ ಪೂರ್ವ ಭಾಗದಲ್ಲಿ ಪರ್ವತಪಾದದ ಪ್ರಸ್ಥಭೂಮಿ ಮತ್ತು ಅಟ್ಲಾಂಟಿಕ್ ಕರಾವಳಿ ಮೈದಾನಗಳಿವೆ. ಸೇಂಟ್ ಲಾರೆನ್ ಕಣಿವೆಯು ಲಾಬ್ರಡಾರ್ ಪ್ರಸ್ಥಭೂಮಿಯನ್ನು ಅಪಲೇಷಿಯನ್ ಶ್ರೇಣಿಗಳಿಂದ ಪ್ರತ್ಯೇಕಿಸುತ್ತದೆ. ಅವು ಕಲ್ಲಿದ್ದಲು, ಸೀಸ, ಸತು, ಕಬ್ಬಿಣದ ಅದಿರು, ತಾಮ್ರ, ಜಲಶಕ್ತಿ ಮತ್ತು ಕಾಡುಮರಗಳಂತಹ ಸಂಪನ್ಮೂಲಗಳಿಂದ ಶ್ರೀಮಂತವಾಗಿವೆ. ಈ ಪ್ರದೇಶವು ಅಪಾರ ಜನಸಂಖ್ಯೆಯನ್ನು ಹೊಂದಿದ್ದು, ಅದು ಉತ್ತರ ಅಮೆರಿಕದ ಆರ್ಥಿಕತೆಗೆ ಪ್ರಮುಖ ಕೊಡುಗೆ ನೀಡಿದೆ.

## *4. ಕರಾವಳಿ ಮೈದಾನ*

ದಕ್ಷಿಣದ ಪನಾಮ ಭೂಕಂಠವನ್ನು ಹೊರತಾಗಿ ಉತ್ತರ ಅಮೆರಿಕಾವು ಬಹಳ ಉದ್ದವಾದ ಮತ್ತು ಕೋಚುಕೋಚಾದ (Indented) ಸಮುದ್ರ ತೀರವನ್ನು ಹೊಂದಿದೆ. ಕರಾವಳಿ ಮೈದಾನವು ಈಶಾನ್ಯದಲ್ಲಿ ಕಿರಿದಾಗಿದೆ ಮತ್ತು ದಕ್ಷಿಣ ಮತ್ತು ಪಶ್ಚಿಮದ ಕಡೆಗೆ ಹೋದಂತೆ ಅಗಲವಾಗಿದೆ. ಸರಾಸರಿ ಎತ್ತರ ಸಮುದ್ರ ಮಟ್ಟಕ್ಕೆ 150 ಮೀ. ಇದು ತಗ್ಗು ಮತ್ತು ಸಾಧಾರಣಾ ಮೈದಾನ ಪ್ರದೇಶವಾಗಿದ್ದು ಫಲವತ್ತಲ್ಲದ ಮರಳು ಮಣ್ಣಿನಿಂದ ಆವರಿಸಿದೆ. ಬಹಳಷ್ಟು ಜವುಗು ಮತ್ತು ಜವುಳು ಭಾಗಗಳಿವೆ. ನದಿ ಮುಖಭಾಗ ಮತ್ತು ಕೊಲ್ಲಿಗಳ ಅಸ್ತಿತ್ವದಿಂದಾಗಿ ಸಮುದ್ರ ತೀರ ಕೋಚುಕೋಚಾಗಿದ್ದು, ಅನೇಕ ಬಂದರುಗಳು ನೆಲಸಿವೆ.

## *ನದಿಗಳು ಮತ್ತು ದೊಡ್ಡ ಸರೋವರಗಳು*

ಉತ್ತರ ಅಮೆರಿಕವು ಕೆಲವು ದೊಡ್ಡ ಮತ್ತು ಚಿಕ್ಕ ನದಿಗಳನ್ನು ಹೊಂದಿದೆ. ಕೆನಡಿಯನ್ ಭೂಫಲಕದ ಸುತ್ತಲಿನ ಅಸಂಖ್ಯಾತ ಸರೋವರಗಳು ಈ ಭೂಖಂಡದ ವೈಶಿಷ್ಟ್ಯ ಭೂಸ್ವರೂಪವನ್ನು ನಿರ್ಮಿಸಿವೆ.

**ನದಿಗಳು:**

ಮಿಸಿಸಿಪ್ಪಿ ಮತ್ತು ಅದರ ಉಪನದಿಗಳು ಉತ್ತರ ಅಮೇರಿಕಾದ ಅತಿ ದೊಡ್ಡ ನದಿ ವ್ಯವಸ್ಥೆಯಾಗಿದ್ದು, ಖಂಡದ ಮೂರನೇ ಎರಡರಷ್ಟು ಭೂಭಾಗದ ಮೂಲಕ ಹರಿಯುತ್ತವೆ. ಮಿಸಿಸಿಪ್ಪಿ ನದಿಯು ಮೆಕ್ಸಿಕೊ ಖಾರಿಯನ್ನು ಸೇರುತ್ತದೆ. ಮಿಸೌರಿ ಎಂಬುದು ಇದರ ಪ್ರಮುಖ ಉಪನದಿ. ರೆಡ್‌ರಿವರ್, ಓಹಾಯೊ, ಅರಕಾನ್ಸ್‌ಸ್, ಟೆನಸ್ಸಿ ಮತ್ತು ಪ್ಲಾಟೆ ಎಂಬುವು ಇತರೆ ಉಪನದಿಗಳು. ಸ್ನೇಕ್, ಫ್ರೇಸರ್, ಕೊಲಂಬಿಯಾ, ಯೂಕಾನ್, ಕೊಲರಾಡೊ, ರಯೊಗ್ರಾಂಡ್, ಮೆಕೆಂಜಿ, ನೆಲ್ಸನ್ ಮತ್ತು ಸೇಂಟ್ ಲಾರೆನ್ಸ್‌ಗಳು ಉತ್ತರ ಅಮೇರಿಕೆಯ ಇತರ ಪ್ರಮುಖ ನದಿಗಳು.



ಉತ್ತರ ಅಮೆರಿಕದ ನದಿಗಳು



ಕೊಲರಾಡೊ, ಕೊಲಂಬಿಯ ಮತ್ತು ಫ್ರೇಸರ್‌ಗಳು ಪಶ್ಚಿಮಕ್ಕೆ ಹರಿಯುವ ಪ್ರಮುಖ ನದಿಗಳು. ಇವು ಚಿಕ್ಕವು ಮತ್ತು ರಭಸದಿಂದ ಹರಿಯುತ್ತವೆ. ಅವು ಪೆಸಿಫಿಕ್ ಸಾಗರವನ್ನು

ಸೇರುತ್ತವೆ.



ಕೊಲರಾಡೊ ನದಿಯು ಕೊಲರಾಡೊ ಪ್ರಸ್ಥಭೂಮಿಯ ಮೂಲಕ ಹರಿಯುತ್ತಾ ಗ್ರಾಂಡ್ ಕ್ಯಾನಿಯನ್ ಮಹಾಕಂದರವನ್ನು ನಿರ್ಮಾಣ ಮಾಡಿದೆ. ಅದು ಪ್ರಕೃತಿ ಸೌಂದರ್ಯ ಮತ್ತು ಪ್ರವಾಸೋದ್ಯಮದ ಕೇಂದ್ರವಾಗಿದೆ. ಈ ಮಹಾಕಂದರವನ್ನು 'ಪ್ರಪಂಚದ ಪ್ರಾಕೃತಿಕ ಅದ್ಭುತ' ಎಂದು ಕರೆಯಲಾಗಿದೆ. ಕೊಲಂಬಿಯಾ ನದಿಯು ಕೊಲಂಬಿಯಾ ಪ್ರಸ್ಥಭೂಮಿಯ ಮೂಲಕ ಹರಿಯುತ್ತದೆ.

**ಮಹಾಕಂದರ (ಅರಿಜೋನ, ಯು. ಎಸ್. ಎ.)**

ಆಳ- ಸುಮಾರು 1800 ಮಿ.

ಅಗಲ- 3 ರಿಂದ 29 ಕಿ. ಮೀ.



ಕೆನಡಿಯನ್ ಫಲಕದಲ್ಲಿ ಅನೇಕ ಚಿಕ್ಕ ನದಿಗಳು ಹರಿಯುತ್ತವೆ. ಅವು ಹಡ್ಸನ್ ಕೊಲ್ಲಿಗೆ ಸೇರುತ್ತವೆ. ಸೇಂಟ್ ಲಾರೆನ್ಸ್ ಅಮೆರಿಕ ಸಂಯುಕ್ತ ಸಂಸ್ಥಾನ ಮತ್ತು ಕೆನಡಗಳ ಅತಿ ಪ್ರಮುಖವಾದ ನದಿಯಾಗಿದೆ. ಇದು ಮಹಾಸರೋವರಗಳ ಮೂಲಕ ಹರಿಯುತ್ತದೆ. ಒಂದು ವರ್ಷದಲ್ಲಿ ಇದರ ನೀರು ಮೂರು ತಿಂಗಳುಗಳ ಕಾಲ ಹೆಪ್ಪುಗಟ್ಟಿರುತ್ತದೆ.

**ಸರೋವರಗಳು:**

ಉತ್ತರ ಅಮೆರಿಕವು ಅಪಾರ ಸಂಖ್ಯೆಯ ಸಿಹಿನೀರಿನ ಮತ್ತು ಉಪ್ಪು ನೀರಿನ ಸರೋವರಗಳನ್ನು ಹೊಂದಿದೆ. ಅವುಗಳು ಕೆನಡಿಯನ್ ಭೂಫಲಕದ ದಕ್ಷಿಣದ ಗಡಿಭಾಗದಲ್ಲಿ ನೆಲೆಗೊಂಡಿವೆ. ಹ್ಯೂರಾನ್, ಒಂಟಾರಿಯೊ, ಮಿಚಿಗನ್, ಐರಿ ಮತ್ತು ಸುಪೀರಿಯರ್ ಗಳು ಪ್ರಮುಖವಾದ ಸರೋವರಗಳಾಗಿವೆ.

ಒಟ್ಟಾರೆಯಾಗಿ ಈ ಸರೋವರಗಳನ್ನು ಹೋಮ್ಸ್ (HOMES) ಎಂದು ಕರೆಯಲಾಗಿದೆ. ಸುಪೀರಿಯರ್ ಸರೋವರವು ಮಹಾಸರೋವರಗಳಲ್ಲಿ ದೊಡ್ಡದಾಗಿದ್ದು ವಿಶ್ವದ ಅತಿ ದೊಡ್ಡ ಸಿಹಿ ನೀರಿನ ಸರೋವರವಾಗಿದೆ. ಚಿಕಾಗೊ ಮತ್ತು ಡೆಟ್ರಾಯಿಟ್ ನಗರಗಳು ಐರಿ ಸರೋವರದ ದಡದಲ್ಲಿ ನೆಲೆಗೊಂಡಿವೆ. ವಿನ್ನಿಪೆಗ್ ಸರೋವರವು ಕೆನಡಾದ ಪ್ರಮುಖ ಸರೋವರವಾಗಿದೆ. ಈ ಎಲ್ಲಾ ಸರೋವರಗಳು ಪ್ರಮುಖವಾದ ಜಲಮಾರ್ಗಗಳನ್ನು ಒದಗಿಸಿವೆ.



## 3. ವಾಯುಗುಣ ಮತ್ತು ಸ್ವಾಭಾವಿಕ ಸಸ್ಯವರ್ಗ

## *ವಾಯುಗುಣ:*

ಉತ್ತರ ಅಮೆರಿಕವು ಅತಿ ವಿಸ್ತಾರವಾದ ವಿಭಿನ್ನ ಮೇಲ್ಮೈ ಲಕ್ಷಣ ಅಕ್ಷಾಂಶಗಳ ವಿಸ್ತರಣೆಗಳಿಂದಾಗಿ ವಿಭಿನ್ನವಾದ ವಾಯುಗುಣವನ್ನು ಹೊಂದಿದೆ. ಅಲಾಸ್ಕ ಮತ್ತು ಗ್ರೀನ್‌ಲ್ಯಾಂಡ್ ಹೆಪ್ಪುಗಟ್ಟುವ ಹವಾಗುಣ ಪರಿಸ್ಥಿತಿಗಳನ್ನು (ಟಂಡ್ರಾ ಮಾದರಿ) ಹೊಂದಿದ್ದರೆ, ಅಮೆರಿಕ ಸಂಯುಕ್ತ ಸಂಸ್ಥಾನದ ನೈರುತ್ಯದಲ್ಲಿರುವ ಮರುಭೂಮಿಗಳು ಸುಡುವ ಶಾಖವನ್ನು ಹೊಂದಿವೆ. ಫ್ಲಾರಿಡದ ಆಗ್ನೇಯ ಭಾಗ, ಕೆರೆಬಿಯನ್ ಮತ್ತು ಕೇಂದ್ರೀಯ ಅಮೆರಿಕ ಉಷ್ಣವಲಯ ಪರಿಸ್ಥಿತಿಯನ್ನು ಹೊಂದಿವೆ. ಈ ಖಂಡದ ಕೇಂದ್ರ ಮತ್ತು ದಕ್ಷಿಣ ಪ್ರದೇಶಗಳು ಹರಿಕೇನ್ ಮತ್ತು ಟೊರ್ನಾಡೊಗಳಂತಹ ಬಿರುಗಾಳಿಯುಕ್ತ ಪ್ರದೇಶಗಳಾಗಿವೆ.



## *ಸ್ವಾಭಾವಿಕ ಸಸ್ಯವರ್ಗ:*

ಸ್ವಾಭಾವಿಕ ಸಸ್ಯವರ್ಗ ಮತ್ತು ಪ್ರಾಣಿವರ್ಗಗಳ ಹಂಚಿಕೆ ಹೆಚ್ಚಾಗಿ ಅಲ್ಲಿನ ವಾಯುಗುಣ, ಮಣ್ಣು ಮತ್ತು ಭೂಸ್ವರೂಪಗಳನ್ನು ಅವಲಂಬಿಸಿದೆ. ಉತ್ತರ ಅಮೆರಿಕವು ಹೊಂದಿರುವ ವೈವಿಧ್ಯ ವಾಯುಗುಣ ಮತ್ತು ಭೂಸ್ವರೂಪಗಳಿಂದಾಗಿ ವೈವಿಧ್ಯಮಯ ಸಸ್ಯವರ್ಗಗಳನ್ನು ಹೊಂದಿದೆ.



ಉತ್ತರ ಅಮೆರಿಕದ ಸ್ವಾಭಾವಿಕ ಸಸ್ಯವರ್ಗ

## ಸೂಚಿಪರ್ಣ ಅರಣ್ಯ

ಈ ಸಸ್ಯವರ್ಗದ ಪಟ್ಟಿಗಳು ಮುಖ್ಯವಾಗಿ ವಾಯುಗುಣ ಪ್ರದೇಶಗಳನ್ನು ಅನುಸರಿಸುತ್ತವೆ. ಅವುಗಳೆಂದರೆ ಟಂಡ್ರಾ ಮಾದರಿಯ ಸಸ್ಯವರ್ಗವು ಉತ್ತರ ಮೇರುವೃತ್ತ (ಆರ್ಕ್ಟಿಕ್ ವೃತ್ತ)ದೊಳಗೆ ಕಂಡುಬರುತ್ತದೆ. ಅದರಲ್ಲೂ ಮುಖ್ಯವಾಗಿ ಕೆನಡ, ಅಲಾಸ್ಕ ಮತ್ತು ಗ್ರೀನ್‌ಲಾಂಡ್‌ಗಳಲ್ಲಿ ಕಂಡುಬರುತ್ತದೆ. ಇಲ್ಲಿ ಚಳಿಗಾಲವು ದೀರ್ಘ ಮತ್ತು ಹೆಪ್ಪುಗಟ್ಟುವ ಸ್ಥಿತಿಯನ್ನೂ ಹಾಗೂ ಬೇಸಿಗೆಯು ಅತಿಕಡಿಮೆ ಅವಧಿಯನ್ನು ಹೊಂದಿದೆ. ಇಲ್ಲಿ ಕಂಡುಬರುವ ಸಸ್ಯವರ್ಗಗಳೆಂದರೆ ಪಾಚಿ ಮತ್ತು ಹಾವಸೆಗಳು ಮಾತ್ರ. ಬೇಸಿಗೆ ಋತುಮಾನದಲ್ಲಿ ಕೆಲವು ಸುಗಂಧ ದ್ರವ್ಯಕ್ಕೆ ಸಂಬಂಧಿಸಿದ ಹೂಬಿಡುವ ಸಸ್ಯಗಳು ಬೆಳೆಯುತ್ತವೆ. ಇಂತಹ ಕಷ್ಟ ಮತ್ತು ಕ್ಲಿಷ್ಟ ಪರಿಸ್ಥಿತಿಗಳಲ್ಲಿ ಬದುಕಬಲ್ಲ ಪ್ರಾಣಿಗಳಾದ ಹಿಮಜಿಂಕೆ, ಕಾರಿಬೊ ಮತ್ತು ಶಾಖಾಹಾರಿಗಳಾದ ಹಿಮಕರಡಿಗಳು ಇಲ್ಲಿ ಕಂಡು ಬರುತ್ತವೆ.



ಟಂಡ್ರಾ ಪಟ್ಟಿಯ ದಕ್ಷಿಣಭಾಗವು ತಂಪಾದ ಸಮಶೀತೋಷ್ಣ ವಿಧದ ವಾಯುಗುಣ ಪ್ರದೇಶದಲ್ಲಿದೆ. ಇದು ವಾಸ್ತವವಾಗಿ ಸೂಚಿಪರ್ಣ ಅರಣ್ಯದ ಪಟ್ಟಿಯಾಗಿದ್ದು ಅದನ್ನು ಟೈಗಾ ಎಂದು ಕರೆಯಲಾಗಿದೆ. ಸೂಚಿಪರ್ಣ ಅರಣ್ಯಗಳಲ್ಲಿ ಸದಾ ಹಸಿರಿನಿಂದ ಕೂಡಿದ ಪ್ರಭೇದಗಳಾದ ಪೈನ್, ಫರ್, ಸ್ಪ್ರೂಸ್, ಲಾರ್ಚ್ ಮುಂತಾದ ಮರಗಳು ಕಂಡುಬರುತ್ತವೆ. ಉಣ್ಣೆಯಂತಹ ಕೂದಲನ್ನು ಹೊಂದಿರುವ ಪ್ರಾಣಿಗಳನ್ನು ಈ ಪ್ರದೇಶದಲ್ಲಿ ಕಾಣಬಹುದು. ಉದಾ: ಲಿಂಕ್ಸ್, ಸಾಬಲ್, ಸಿಲ್ವರ್ ತೋಳ ಇತ್ಯಾದಿ.

 

 





ಎಲೆಯುದುರುವ ವಿಧದ ಅರಣ್ಯಗಳನ್ನು ಸೆಂಟ್ ಲಾರೆನ್ಸ ಮತ್ತು ಮಹಾಸರೋವರಗಳ ಪೂರ್ವಭಾಗದಲ್ಲಿ ಕಾಣಬಹುದು. ಈ ಪ್ರಾಂತ್ಯದ ಉತ್ತರ ಭಾಗವು ಶೀತದಿಂದ ಮತ್ತು ದಕ್ಷಿಣದ ಭಾಗವು ಬೆಚ್ಚನೆಯ ಹವಾ ಗುಣದಿಂದ ಕೂಡಿದೆ. ಚಳಿಗಾಲವು ಶೀತವಾಗಿದ್ದರೆ ಬೇಸಿಗೆಯು ಬೆಚ್ಚಗಿದೆ ಮತ್ತು ಸಾಮಾನ್ಯವಾಗಿ ಮಳೆಯನ್ನು ಪಡೆಯುತ್ತದೆ ಇಲ್ಲಿ ಕಂಡುಬರುವ ಮರಗಳು ನಿರ್ದಿಷ್ಟ ಪಡಿಸಿದ ಅವಧಿಯಲ್ಲಿ ತಮ್ಮ ಎಲೆಗಳನ್ನು ಉದುರಿಸಿಕೊಳ್ಳುತ್ತವೆ. ಉದಾ: ಸೈಪ್ರಸ್, ಓಕ್, ಆಶ್ ಮತ್ತು ಚೆಸ್ಟ ನಟ್‌ಗಳು. ಇಲ್ಲಿ ಕಂಡುಬರುವ ವನ್ಯಜೀವಿಗಳೆಂದರೆ ಬೀವರ್, ಕಪ್ಪುಕರಡಿ, ಹಿಮಇಲಿ ಮತ್ತು ಮುಳ್ಳುಹಂದಿ.

ತಂಪಾದ ಸಮಶೀತೋಷ್ಣವಲಯದ ವಾಯುಗುಣವನ್ನು ಅಮೆರಿಕ ಸಂಯುಕ್ತ ಸಂಸ್ಥಾನದ ಭಾಗಗಳಲ್ಲಿ ಕಾಣಬಹುದಾಗಿದೆ. ರಾಕೀ ಪರ್ವತಗಳು ಮತ್ತು ಮಿಸಿಸಿಪ್ಪಿ-ಮಿಸ್ಸೋರಿ ಬಯಲುಗಳ ಮಧ್ಯೆ ವಿಶಾಲವಾದ ಹುಲ್ಲುಗಾವಲು ಪ್ರದೇಶವಿದೆ. ಇದನ್ನು ಪ್ರೈರೀಸ್ ಎಂತಲೂ ಕರೆಯಲಾಗುತ್ತದೆ. ಇದು ವಾಸ್ತವವಾಗಿ ವಿಶಾಲವಾದ ವೃಕ್ಷರಹಿತ ಪ್ರದೇಶವಾಗಿದೆ. ಈ ಮೈದಾನ ಪ್ರದೇಶವು ಗೋಧಿ ಬೇಸಾಯ ಮತ್ತು ಪಶುಸಂಗೋಪನೆಗೆ ಹೆಸರುವಾಸಿಯಾಗಿದೆ. ಇದನ್ನು ಪ್ರಪಂಚದ ಗೋಧಿಯ ಕಣಜ ಅಥವಾ 'ರೊಟ್ಟಿಯ ಬುಟ್ಟಿ' ಎಂದು ಕರೆಯುತ್ತಾರೆ.



ಸೂಚಿಪರ್ಣ ಮತ್ತು ಎಲೆ ಉದುರಿಸುವ ಮರಗಳು ಸಮಶೀತೋಷ್ಣ ಮಿಶ್ರ ಅರಣ್ಯಗಳಲ್ಲಿ ಕಂಡುಬರುತ್ತವೆ. ಕೆನಡ ಮತ್ತು ಉತ್ತರ ಕ್ಯಾಲಿಫೋರ್ನಿಯಗಳು ಅಂತಹ ಅರಣ್ಯಗಳನ್ನು ಹೊಂದಿವೆ. ಈ ಅರಣ್ಯ ಪ್ರದೇಶದಲ್ಲಿ ಕಂಡುಬರುವ ಪ್ರಮುಖ ಮರಗಳೆಂದರೆ ಬರ್ಚ್, ಬೀಚ್, ಮ್ಯಾಪಲ್, ಓಕ್ ಮುಂತಾದವುಗಳು.





ಕೆನಡ ಸರೋವರಗಳಿಂದ ಕೂಡಿದ ದೇಶ. ವಿರಳ ಜನಸಂಖ್ಯೆ ಹಾಗೂ ಅಪಾರ ಟೈಗಾ ಮಾದರಿಯ ಕಾಡುಗಳನ್ನು ಹೊಂದಿದೆ. ಪ್ರಪಂಚದ ಅತ್ಯಧಿಕ ಮರದ ರಫ್ತು ಇಲ್ಲಿಂದಾಗುತ್ತದೆ.

ಮೆಕ್ಸಿಕೊದ ದಕ್ಷಿಣ ಭಾಗ ಮತ್ತು ವೆಸ್ಟ್ ಇಂಡಿಸ್ ಪ್ರದೇಶವು ಉಷ್ಣವಲಯದ ಅರಣ್ಯಗಳನ್ನು ಹೊಂದಿದೆ. ಇಲ್ಲಿ ಗಟ್ಟಿಮರಗಳಾದ ಮಹಾಗನಿ ಮತ್ತು ಲಾಗ್‌ವುಡ್‌ಗಳನ್ನು ಒಳಗೊಂಡಂತಿರುವ ಮಿಶ್ರ ಅರಣ್ಯಗಳನ್ನು ಕಾಣಬಹುದು.

ಕ್ಯಾಲಿಫೋರ್ನಿಯದ ಪಶ್ಚಿಮ ಕರಾವಳಿಯು ಮೆಡಿಟರೇನಿಯನ್ ವಿಧದ ವಾಯುಗುಣ ಹೊಂದಿದೆ. ದೀರ್ಘ ಬೇಸಿಗೆ ಬರಪರಿಸ್ಥಿತಿಗೆ ನೈಜವಾಗಿ ಹೊಂದಿಕೊಳ್ಳಬಲ್ಲ ಸಸ್ಯವರ್ಗವಿದೆ. ಇಲ್ಲಿ ಆಲಿವ್, ಓಕ್, ಕಾರ್ಕ್ ಮುಂತಾದ ಮರಗಳು ಬೆಳೆಯುತ್ತವೆ. ಈ ಪ್ರದೇಶವು ಹುಳಿಹಣ್ಣು (ಕಿತ್ತಳೆ) ಬೇಸಾಯಕ್ಕೆ ಪ್ರಸಿದ್ಧಿ. ದಕ್ಷಿಣ ಕ್ಯಾಲಿಫೋರ್ನಿಯ, ಮೆಕ್ಸಿಕೊ ಮತ್ತು ಅರಿಝೋನಗಳಲ್ಲಿ ಈ ಖಂಡದ ಪಶ್ಚಿಮ ಭಾಗದ ಮರುಭೂಮಿಯಂತಹ (ಶುಷ್ಕ) ಪರಿಸ್ಥಿತಿಯನ್ನು ಕಾಣಬಹುದಾಗಿದೆ. ವಿವಿಧ ರೀತಿಯ ಪಾಪಾಸು ಕಳ್ಳಿ ಮತ್ತು ಮುಳ್ಳಿನ

ಪೊದೆಗಳು ಇಲ್ಲಿ ಸರ್ವೆಸಾಮಾನ್ಯ. ಇಲ್ಲಿನ ಮರುಭೂಮಿಯ ರಾತ್ರಿಗಳನ್ನು 'ಮರುಭೂಮಿಗಳ ಚಳಿಗಾಲ'ವೆಂದು ಕರೆಯಲಾಗಿದೆ.





## 4. ಕೃಷಿ

ಕೃಷಿಯು ಉತ್ತರ ಅಮೆರಿಕದ ಒಂದು ಪ್ರಮುಖವಾದ ಕಸಬಾಗಿದೆ. ಈ ಖಂಡದ ಕೇಂದ್ರೀಯ ತಗ್ಗು ಪ್ರದೇಶಗಳಾದ ಅದರಲ್ಲೂ ವಿಶೇಷವಾಗಿ ಕೆನಡ ಮತ್ತು ಅಮೆರಿಕ ಸಂಯುಕ್ತ ಸಂಸ್ಥಾನಗಳು ಅತ್ಯಧಿಕ ಕೃಷಿ ಉತ್ಪನ್ನ ರಾಷ್ಟ್ರಗಳಾಗಿವೆ. ಉತ್ತರ ಅಮೆರಿಕದ ಒಟ್ಟು ಭೂಭಾಗದಲ್ಲಿನ ಶೇ. 10 ರಷ್ಟು ಪ್ರದೇಶವು ಮಾತ್ರ ಕೃಷಿಗೆ ಸೂಕ್ತವಾಗಿದೆ. ಆದರೆ ಆ ಕೃಷಿಕ್ಷೇತ್ರಗಳಿಂದ ಬರುತ್ತಿರುವ ಉತ್ಪನ್ನ ಅತಿ ಹೆಚ್ಚು. ಏಕೆಂದರೆ ವಿಸ್ತಾರವಾದ ಭೂಹಿಡುವಳಿ, ಫಲವತ್ತಾದ ಮಣ್ಣು, ಸಾಕಷ್ಟು ನೀರಾವರಿ, ಯಾಂತ್ರಿಕ ಬೇಸಾಯ ಹಾಗೂ ಇತರ ಸೌಲಭ್ಯಗಳ ಜೊತೆಗೆ ಮಾನವನ ಪೂರ್ಣ ಶ್ರಮವಿರುವುದರಿಂದ ಉತ್ತರ ಅಮೆರಿಕವನ್ನು ವಿಶ್ವದ ಅತಿದೊಡ್ಡ ಕೃಷಿಪ್ರದೇಶವಾಗಿ ಪರಿಣಮಿಸಿದೆ.

ವಿಶಿಷ್ಟ ಬೆಳೆಗಳ ಉತಾದ್ಪನೆಯಲ್ಲಿ ವಿಶಿಷ್ಟತೆಯನ್ನು ಹೊಂದಿರುವ ಪ್ರಾಂತ್ಯಗಳನ್ನು ಬೆಳೆಪಟ್ಟಿ ಎಂದು ಕರೆಯಲಾಗಿದೆ. ಉದಾ: ಕಾರ್ನ್ ಪಟ್ಟಿ, ಗೋಧಿಪಟ್ಟಿ, ಹತ್ತಿಪಟ್ಟಿ, ತಂಬಾಕುಪಟ್ಟಿ ಇತ್ಯಾದಿ.

ಉತ್ತರ ಅಮೆರಿಕ ಅದರಲ್ಲೂ ವಿಶೇಷವಾಗಿ ಕೆನಡ ಮತ್ತು ಅಮೆರಿಕ ಸಂಯುಕ್ತ ಸಂಸ್ಥಾನಗಳು ಗೋಧಿಯನ್ನು ಒಂದು ಪ್ರಮುಖ ಆಹಾರ ಧಾನ್ಯವನ್ನಾಗಿ ಬೆಳೆಯುತ್ತಿವೆ. ಪ್ರೈರೀ ಪ್ರದೇಶವು ಗೋಧಿ ಬೇಸಾಯಕ್ಕೆ ಸೂಕ್ತ ಮಣ್ಣನ್ನು ಒದಗಿಸಿದೆ. ಇಲ್ಲಿನ ಜನಸಂಖ್ಯೆಯು ಕಡಿಮೆಯಿದ್ದು, ಅಪಾರ ಪ್ರಮಾಣದ ಉತ್ಪಾದನೆ ಇರುವುದರಿಂದ ಅದನ್ನು ರಫ್ತು ಮಾಡಲಾಗುತ್ತಿದೆ. ಮೆಕ್ಕೆಜೋಳವು ಕಾರ್ನ್ ಎಂದು ಪ್ರಖ್ಯಾತಿಪಡೆದಿದೆ. ಅದನ್ನು ಅಮೆರಿಕ ಸಂಯುಕ್ತ ಸಂಸ್ಥಾನ ಮತ್ತು ಮೆಕ್ಸಿಕೊಗಳಲ್ಲಿ ವಿಶಾಲ ಪ್ರದೇಶಗಳಲ್ಲಿ ಬೆಳೆಯಲಾಗುತ್ತದೆ. ಬಹುತೇಕ ಪ್ರಮಾಣದ ಮೆಕ್ಕೆ ಜೋಳವನ್ನು ಹಸು ಮತ್ತು ಹಂದಿಗಳ ಮೇವಿಗಾಗಿ ಉಪಯೋಗಿಸಲಾಗುತ್ತದೆ. ಇವುಗಳನ್ನು ಮೆಕ್ಸಿಕೊದಲ್ಲಿ ಮಾಂಸಕ್ಕಾಗಿ ಸಾಕಲಾಗುತ್ತದೆ.

ಇದೊಂದು ಆಹಾರ ಧಾನ್ಯವಾಗಿದೆ. ಆದರೆ ಇಂದು ಮೆಕ್ಕೆಜೋಳವು ಇಂಧನ ಬೆಳೆಯಾಗಿ ಬೆಳೆಯಲಾಗುತ್ತಿದೆ.





ಇತರ ಪ್ರಧಾನ ಬೆಳೆಗಳೆಂದರೆ ಬಾರ್ಲಿ, ಓಟ್ ಮತ್ತು ಆಲೂಗಡ್ಡೆಗಳಾಗಿವೆ. ಬಾರ್ಲಿ ಮತ್ತು ಓಟ್‌ಸ್‌ಗಳನ್ನು ಚಳಿಗಾಲದಲ್ಲಿ ಬೆಳೆಯಬಹುದು. ಬಾರ್ಲಿಯನ್ನು ಬಿಯರ್ (beer) ತಯಾರಿಕೆಗೆ ಬಳಸಲಾಗುತ್ತದೆ. ಓಟ್ಸನ್ನು ಪ್ರಾಣಿಗಳ ಮೇವುಗಳಿಗಾಗಿ ಉಪಯೋಗಿಸಲಾಗುತ್ತದೆ. ಈ ಖಂಡದಲ್ಲಿ ಆಲೂಗಡ್ಡೆಯನ್ನು ಸಹ ಬೆಳೆಯಲಾಗುತ್ತಿದ್ದು ಇದು ಪ್ರಮುಖ ಆಹಾರ ಬೆಳೆಯಾಗಿದೆ.

ಉತ್ತರ ಅಮೆರಿಕದಲ್ಲಿ ಹತ್ತಿ ಮತ್ತು ತಂಬಾಕುಗಳನ್ನು ವಾಣಿಜ್ಯ ಬೆಳೆಗಳನ್ನಾಗಿ ದಕ್ಷಿಣ ಭಾಗಗಳಲ್ಲಿ ಬೆಳೆಯಲಾಗುತ್ತಿದೆ. ಮಿಸಿಸಿಪ್ಪಿ ನದಿಯ ಕಣಿವೆಯುದ್ದಕ್ಕೂ ಹತ್ತಿ ಪ್ರದೇಶವು ಕಂಡುಬರುತ್ತದೆ. ಯು. ಎಸ್. ಎ ಮತ್ತು ಮೆಕ್ಸಿಕೊ ದೇಶಗಳಲ್ಲಿ ಉದ್ದ ಎಳೆಯ ಹತ್ತಿಯನ್ನು ಉತ್ಪಾದಿಸಲಾಗುತ್ತದೆ. ದಕ್ಷಿಣ ಯು. ಎಸ್. ಎ, ಕ್ಯೂಬ, ಜಮೈಕ ಮತ್ತು ಮೆಕ್ಸಿಕೊಗಳಲ್ಲಿ ತಂಬಾಕು ಬೆಳೆಯಲಾಗುತ್ತದೆ. ಅಮೆರಿಕ ತಂಬಾಕು ಬೆಳೆಯುತ್ತಿರುವ ವಿಶ್ವದ ರಾಷ್ಟ್ರಗಳಲ್ಲಿ ಚೀನದ ನಂತರ ಎರಡನೇ ಸ್ಥಾನದಲ್ಲಿದೆ.

ಕಬ್ಬು ಇಲ್ಲಿ ಬೆಳೆಯುತ್ತಿರುವ ಮತ್ತೊಂದು ಪ್ರಮುಖ ಬೆಳೆಯಾಗಿದೆ. ಕ್ಯೂಬಾ ವಿಶ್ವದಲ್ಲಿ ಸಕ್ಕರೆ ಉತ್ಪಾದನೆಯ ಮೂರನೇ ಅತಿ ದೊಡ್ಡ ರಾಷ್ಟ್ರವಾಗಿರುವುದರಿಂದಲೇ ಇದನ್ನು

‘ಜಗತ್ತಿನ ಸಕ್ಕರೆ ಬೋಗುಣಿ’ ಎಂದು ಕರೆಯಲಾಗಿದೆ. ಯು. ಎಸ್. ಎ ದಲ್ಲಿ ಶುಗರ್ ಬೀಟ್‌ನ್ನೂ ಸಹ ಬೆಳೆಯಲಾಗುತ್ತದೆ. ಇದು ಸಕ್ಕರೆ ತಯಾರಿಕೆಗೆ ಕಬ್ಬಿನ ತರುವಾಯ ಪ್ರಮುಖ ಮೂಲವಾಗಿದೆ.

ಕಾಫಿ ಮತ್ತು ಕೋಕೊಗಳು ಉಷ್ಣವಲಯದ ತೋಟಗಾರಿಕಾ ಬೆಳೆಯಾಗಿದ್ದು, ಇವುಗಳನ್ನು ಅಮೆರಿಕದ ಕೇಂದ್ರ ಭಾಗಗಳು ಮತ್ತು ವೆಸ್ಟ್ ಇಂಡಿಸ್‌ಗಳಲ್ಲಿ ಬೆಳೆಯಲಾಗುತ್ತಿದೆ. ಕ್ಯಾಲಿಫೋರ್ನಿಯ, ಪ್ಲಾರಿಡಾ, ನ್ಯೂಜೆರ್ಸಿ ಮತ್ತು ನಗರ ಕೇಂದ್ರಗಳ ಸುತ್ತಲಿನ ಪ್ರದೇಶಗಳಲ್ಲಿ ಧ್ರಾಕ್ಷಿ, ಕಿತ್ತಳೆ, ನಿಂಬೆ (ಲಿಂಬೆ), ಸೇಬು, ಸೀಬೆ, ಪೀಚ್ ಇತ್ಯಾದಿ ಹಣ್ಣುಗಳನ್ನು ಬೆಳೆಯಲಾಗುತ್ತಿದೆ. ಕ್ಯಾಲಿಫೋರ್ನಿಯವು ಉತ್ತರ ಅಮೆರಿಕದ ಶೇ. 90 ರಷ್ಟು ಧ್ರಾಕ್ಷಿಯನ್ನು ಬಳಸಿ ಧ್ರಾಕ್ಷಾರಸ ಉತ್ಪಾದಿಸುತ್ತದೆ. ಆದುದರಿಂದ ಕ್ಯಾಲಿಫೋರ್ನಿಯವನ್ನು “ಧ್ರಾಕ್ಷಾರಸದ ನಾಡು’’ ಎಂದು ಕರೆಯಲಾಗಿದೆ.





ಉತ್ತರ ಅಮೆರಿಕ ಖಂಡದ ಈಶಾನ್ಯ ಭಾಗದ ಅಂಟ್ಲಾಂಟಿಕ್ ಸಾಗರ ತೀರದಲ್ಲಿ ಗ್ರ್ಯಾಂಡ್ ಬ್ಯಾಂಕ್‌ಗಳು, ನ್ಯೂಇಂಗ್ಲೆಂಡಿನ ಜಾರ್ಜಸ್ ಬ್ಯಾಂಕ್‌ಗಳು ಮತ್ತು ನ್ಯೂಫೌಂಡ್ ಲ್ಯಾಂಡ್ ಕರಾವಳಿಗಳ ಆಳವಿಲ್ಲದ ಖಂಡಾವರಣ ಪ್ರದೇಶಗಳು ಹೆಸರಾಂತ ಮೀನುಗಾರಿಕಾ ಪ್ರದೇಶಗಳಾಗಿವೆ.

## 5. ಪ್ರಮುಖ ಖನಿಜಗಳು ಮತ್ತು ಕೈಗಾರಿಕೆಗಳು

ಉತ್ತರ ಅಮೆರಿಕವು ಅಪಾರ ಸಂಪನ್ಮೂಲಗಳ ಕೊಡುಗೆಗೆ ಒಳಗಾಗಿದೆ. ಅದರ ನೈಸರ್ಗಿಕ ಸಂಪನ್ಮೂಲಗಳೆಂದರೆ ವೈವಿಧ್ಯಮಯ ಮಣ್ಣುಗಳು, ವಿಸ್ತಾರವಾದ ಹುಲ್ಲುಗಾವಲು, ಖನಿಜ, ಶಕ್ತಿ ಸಂಪನ್ಮೂಲಗಳು ಮತ್ತು ಅರಣ್ಯ ಸಂಪತ್ತುಗಳಾಗಿದೆ.

ಉತ್ತರ ಅಮೆರಿಕ ಭೂಖಂಡವು ವಿವಿಧ ಬೆಲೆಬಾಳುವ ಖನಿಜಗಳ ಅಧಿಕ ನಿಕ್ಷೇಪವನ್ನು ಹೊಂದಿದೆ. ಇಲ್ಲಿರುವ ಚಿನ್ನದ ನಿಕ್ಷೇಪವು ಜನರನ್ನು ಈ ಖಂಡಕ್ಕೆ ಬಹು ಹಿಂದೆಯೇ ಆಕರ್ಷಿಸಿದೆ. ಇದಲ್ಲದೆ ಕಬ್ಬಿಣದ ಅದಿರು, ತಾಮ್ರ, ನಿಕಲ್, ಬೆಳ್ಳಿ ಮತ್ತು ಸತುಗಳು ಇತರ ಪ್ರಮುಖವಾದ ಖನಿಜ ನಿಕ್ಷೇಪಗಳಾಗಿವೆ. ಈ ಖಂಡವು ಸಾಕಷ್ಟು ಪ್ರಮಾಣದ ಕಲ್ಲಿದ್ದಲು, ಕಲ್ಲೆಣ್ಣೆ ಮತ್ತು ನೈಸರ್ಗಿಕ ಅನಿಲಗಳನ್ನು ಹೊಂದಿದೆ.

ಉತ್ತರ ಅಮೆರಿಕದಲ್ಲಿ ಪ್ರಪ್ರಥಮ ಖನಿಜ ಗಣಿಯೆಂದರೆ ಚಿನ್ನದ ಗಣಿಯಾಗಿದೆ. ಕ್ಯಾಲಿಫೋರ್ನಿಯ ಮತ್ತು ಯುಕಾನ್ ಕಣಿವೆಗಳು ಚಿನ್ನದ ಗಣಿಗಳ ಪ್ರಮುಖ ಪ್ರದೇಶಗಳಾಗಿವೆ. ಸುಪೀರಿಯರ್ ಸರೋವರ ಮತ್ತು ಅದನ್ನು ಸುತ್ತುವರಿದಿರುವ ಪ್ರದೇಶಗಳು ಅಪಾರ ಪ್ರಮಾಣದ ಕಬ್ಬಿಣದ ಅದಿರಿನ ನಿಕ್ಷೇಪಕ್ಕೆ ಪ್ರಖ್ಯಾತಿ ಪಡೆದಿವೆ. ಅತಿ ಉತ್ಕೃಷ್ಟ ದರ್ಜೆಯ ಕಬ್ಬಿಣದ ಅದಿರನ್ನು ಕೆನಡಿಯನ್ ಭೂಫಲಕದಲ್ಲಿ ಮತ್ತು ಅದನ್ನು ಸುತ್ತುವರಿದ ಪ್ರದೇಶದಲ್ಲಿ ಕಾಣಬಹುದಾಗಿದೆ. ಮೆಕ್ಸಿಕೊ ವಿಶ್ವದ ಪ್ರಮುಖ ಬೆಳ್ಳಿ ಉತ್ಪಾದಿಸುತ್ತಿರುವ ರಾಷ್ಟ್ರವಾಗಿದೆ. ಅಮೆರಿಕ ಸಂಯುಕ್ತ ಸಂಸ್ಥಾನವು ಪ್ರಪಂಚದ ಅತ್ಯಧಿಕ ತಾಮ್ರವನ್ನು ಉತ್ಪಾದಿಸುತ್ತಿರುವ ರಾಷ್ಟ್ರವಗಿದೆ. ಖಂಡಾದಾದ್ಯಂತ ಪಳೆಯುಳಿಕೆ ಇಂಧನಗಳು ಸಾಧಾರಣ ಪ್ರಮಾಣದಲ್ಲಿ ಹಂಚಿಕೆಯಾಗಿರುವುದು ಕಂಡುಬರುತ್ತದೆ.














ಉತ್ತರ ಅಮೆರಿಕವು ಇಲ್ಲಿನ ಅಪಲೇಷಿಯನ್ ಪ್ರದೇಶದಲ್ಲಿ ಉತ್ತಮ ದರ್ಜೆಯ ಕಲ್ಲಿದ್ದಲ್ಲಿನ ಅಧಿಕ ನಿಕ್ಷೇಪವನ್ನು ಹೊಂದಿದೆ. ಜಗತ್ತಿನ ಒಟ್ಟು ಕಲ್ಲಿದ್ದಲಿನ ಉತ್ಪಾದನೆಯಲ್ಲಿ ಶೇಕಡಾ 20 ರಷ್ಟು ಪೆನ್ಸಿಲ್ವೇನಿಯಾ ಒಂದೇ ಉತ್ಪಾದಿಸುವುದು. ಅಮೆರಿಕ ಸಂಯುಕ್ತ ಸಂಸ್ಥಾನವು ಪ್ರಪಂಚದ ಅತ್ಯಧಿಕ ಕಲ್ಲಿದ್ದಲನ್ನು ರಫ್ತು ಮಾಡುತ್ತಿರುವ ದೇಶವಾಗಿದೆ. ಅಲಾಸ್ಕಾ, ಟೆಕ್ಸಾಸ್, ಲೂಷಿಯಾನ, ಕಾನ್ಸಾಸ್ ಮತ್ತು ಪಶ್ಚಿಮ ಕೆನಡಾದಲ್ಲಿ ಮತ್ತು ಮೆಕ್ಸಿಕೊದ ಕೆಲವು ಭಾಗಗಳಲ್ಲಿ ತೈಲ ಮತ್ತು ನೈಸರ್ಗಿಕ ಅನಿಲವಿರುವುದು ಕಂಡುಬಂದಿವೆ. ಪೆಸಿಫಿಕ್ ಮಹಾಸಾಗರದಂಚಿನ ಪ್ರದೇಶಗಳು ನೈಸರ್ಗಿಕ ಅನಿಲದ ಅಧಿಕ ನಿಕ್ಷೇಪವನ್ನು ಹೊಂದಿವೆ. ಅಮೆರಿಕ ಸಂಯುಕ್ತ ಸಂಸ್ಥಾನವು ಪ್ರಮುಖ ಪೆಟ್ರೋಲಿಯಂ ಉತ್ಪಾದಿಸುತ್ತಿರುವ ರಾಷ್ಟ್ರವಾಗಿದೆಯಲ್ಲದೆ ವಿಶ್ವದಲ್ಲಿ ಅಧಿಕ ಅಣುಶಕ್ತಿಯನ್ನು ಉತ್ಪಾದಿಸುತ್ತಿರುವ ದೇಶವೂ ಆಗಿದೆ.

ಉತ್ತರ ಅಮೆರಿಕದ ದೇಶಗಳಲ್ಲಿ ಅಮೆರಿಕ ಸಂಯುಕ್ತ ಸಂಸ್ಥಾನ ಮತ್ತು ಕೆನಡಗಳು ಹೆಚ್ಚು ಕೈಗಾರಿಕೀಕರಣಕ್ಕೊಳಪಟ್ಟಿವೆ. ಇಲ್ಲಿ ಲಭ್ಯವಿರುವ ಕಬ್ಬಿಣದ ಅದಿರು, ಕಲ್ಲಿದ್ದಲು, ತಾಮ್ರ, ಬಾಕ್ಸೈಟ್‌ಗಳಂತಹ ಕಚ್ಚಾ ವಸ್ತುಗಳು ಭಾರಿ ಕೈಗಾರಿಕೆಗಳಿಗೆ ಸಹಾಯಕವಾಗಿವೆ. ಶಕ್ತಿ, ಸಾರಿಗೆ ಮತ್ತು ಆಧುನಿಕ ತಾಂತ್ರಿಕತೆಗಳ ಲಭ್ಯತೆಯು ವಿಸ್ತೃತ ಕೈಗಾರಿಕೀಕರಣಕ್ಕೆ ಕಾರಣವಾಗಿದೆ.

ಐರಿ, ಸುಪೀರಿಯರ್ ಮತ್ತು ಮಿಚಿಗನ್ ಸರೋವರಗಳ ಪ್ರದೇಶಗಳಲ್ಲಿ ಕಬ್ಬಿಣ ಮತ್ತು ಉಕ್ಕಿನ ಕೈಗಾರಿಕೆಗಳು ಉತ್ತಮವಾಗಿ ಅಭಿವೃದ್ಧಿಗೊಂಡಿರುವುದನ್ನು ಕಾಣಬಹುದು. ಇದಕ್ಕೆ ಇಲ್ಲಿನ ಕಚ್ಚಾವಸ್ತು ಮತ್ತು ಜಲಸಾರಿಗೆಗಳು ಸಹಾಯಕವಾಗಿವೆ. ಯು. ಎಸ್. ಎದಲ್ಲಿ ಅನುಕೂಲಕರವಾದ ಕೈಗಾರಿಕಾ ನೀತಿಯು ಕೈಗಾರಿಕೆಗಳ ಬೆಳವಣಿಗೆಗೆ ಸಹಾಯಕವಾಗಿದೆ. ಇಲ್ಲಿನ ಪಿಟ್ ಬರ್ಗ್ ನಗರವನ್ನು 'ಉಕ್ಕಿನ ನಗರ' ಎಂದು ಕರೆಯಲಾಗಿದೆ. ಇದಕ್ಕೆ ಕಾರಣ ಅಪಲೇಷಿಯನ್ ಪ್ರದೇಶದಲ್ಲಿ ದೊರೆಯುವ ಸಂಪದ್ಭರಿತವಾದ ಕಲ್ಲಿದ್ದಲು ನಿಕ್ಷೇಪಗಳು, ಜಲವಿದ್ಯುಚ್ಛಕ್ತಿ ಮತ್ತು ಬೃಹತ್ ಪ್ರಮಾಣದ ಸರಕುಗಳನ್ನು ಸಾಗಿಸಲು ಉತ್ತಮ ಸಾರಿಗೆ ಸೌಲಭ್ಯವಿರುವುದು. ಕಬ್ಬಿಣ ಮತ್ತು ಉಕ್ಕಿನ ಕೈಗಾರಿಕೆಯು ಮೂಲ ಕೈಗಾರಿಕೆಯಾದ್ದರಿಂದ ಇದು ಇತರ ಕೈಗಾರಿಕೆಗಳಾದ ಆಟೋಮೊಬೈಲ್, ಹಡಗು ನಿರ್ಮಾಣ, ಲೋಕೋಮೋಟೀವ್, ಭಾರಿ ಇಂಜಿನಿಯರಿಂಗ್, ವಿಮಾನ ನಿರ್ಮಾಣ ಮುಂತಾದ ಕೈಗಾರಿಕೆಗಳ ಅಭಿವೃದ್ಧಿಗೆ ಸಹಾಯಕವಾಗಿದೆ.

ಅಮೆರಿಕ ಸಂಯುಕ್ತ ಸಂಸ್ಥಾನ ಮತ್ತು ಕೆನಡಗಳಲ್ಲಿ ಮೃದು ಮರಗಳನ್ನು ಕಾಗದ, ಕಾರ್ಡ್‌ಬೋರ್ಡ್ ಮತ್ತು ನ್ಯೂಸ್‌ಪ್ರಿಂಟ್‌ಕಾಗದಗಳ ತಯಾರಿಕೆಯಲ್ಲಿ ಉಪಯೋಗಿಸಲಾಗುತ್ತದೆ. ಮರದ ತಿರುಳನ್ನು ಕೃತಕ ನಾರು ತಯಾರಿಕೆಯಲ್ಲಿ ಬಳಸುವರು. ಕಾಗದ, ಮರದ ತಿರುಳು ಮತ್ತು ನ್ಯೂಸ್‌ಪ್ರಿಂಟ್‌ಕಾಗದಗಳ ರಫ್ತಿನಲ್ಲಿ ಕೆನಡವು ಅತಿ ಪ್ರಮುಖ ರಾಷ್ಟ್ರವಾಗಿದೆ. ಮರಕಡಿಯುವಿಕೆ ಉತ್ತರ ಅಮೆರಿಕದಲ್ಲಿ ಉತ್ತಮ ಸಂಘಟಿತ ವೃತ್ತಿಯಾಗಿದೆ. ಕೆನಡದಲ್ಲಿ ಮರಕಡಿಯುವ ವೃತ್ತಿಯನ್ನು ಅವಲಂಬಿಸಿರುವ ಜನರನ್ನು ಲಂಬರ್ ಜಾಕ್ಸ್ ಎಂದು ಕರೆಯಲಾಗುತ್ತದೆ. ರಾಸಾಯನಿಕ ಕೈಗಾರಿಕೆಯು ಕೃತಕ ರಬ್ಬರ್, ಪ್ಲಾಸ್ಟಿಕ್, ರಸಗೊಬ್ಬರಗಳು ಮತ್ತು ಔಷಧಿಗಳಂತಹ ವಿಭಿನ್ನ ವಸ್ತುಗಳನ್ನು ಉತ್ಪಾದಿಸುತ್ತದೆ. ಈಗ ಮರದ ಬದಲಾಗಿ ಪ್ಲಾಸ್ಟಿಕ್‌ನ್ನು ಹೆಚ್ಚಾಗಿ ಬಳಸಲಾಗುತ್ತಿದೆ. ಅಮೆರಿಕ ಸಂಯುಕ್ತ ಸಂಸ್ಥಾನದ ಎಲ್ಲಾ ಭಾಗಗಳಲ್ಲಿಯೂ ಪ್ಲಾಸ್ಟಿಕ್‌ನ್ನು ತಯಾರಿಸಲಾಗುತ್ತಿದೆ. ಚಿಕಾಗೊ ನಗರವು ಪ್ಲಾಸ್ಟಿಕ್ ಕೈಗಾರಿಕೆಗೆ ಹೆಸರುವಾಸಿಯಾಗಿದೆ.

